# ಹರಿದಾಸರು ಸ್ತುತಿಸಿದ
# ಶ್ರೀ ಸತ್ಯಬೋಧತೀರ್ಥರು

ಸಂಪಾದಕ

ಶ್ರೀನಿವಾಸ ಹಾವನೂರ

ಪ್ರಕಾಶನ:

ಶ್ರೀ ವಾದಿರಾಜ ಮೃತ್ತಿಕಾ ವೃಂದಾವನ ಮಠ

Haridaasaru Stutisida Shri Satyadodhatirtharu. Compiled by Dr. Shrinivasa Havanur. Published by Shri Vaadiraaja Mrttikaa Vrindavana Matha, Havanur. 2001

Rs. 28.00

ಪುಟಗಳು : ೧೨೪ + ೧೦ ಚಿತ್ರಗಳು. ೨೦೦೧

ರೂ. ೨೮.೦೦

ಪ್ರಕಾಶನ :

ಶ್ರೀ ವಾದಿರಾಜ ಮೃತ್ತಿಕಾ ವೃಂದಾವನ ಮಠ
ಹಾವನೂರ. ಜಿ. ಹಾವೇರಿ - ೫೮೧ ೧೩೩

ಪ್ರತಿಗಳಿಗಾಗಿ :

ಡಾ। ಶ್ರೀನಿವಾಸ ಹಾವನೂರ
ನಂ.೩೬, ವಿನಾಯಕ ಲೇಔಟ್,
ವಿಜಯನಗರ ೩ನೇ ಹಂತ,
ಬೆಂಗಳೂರು - ೫೬೦ ೦೪೦
ಫೋನ್ : ೩೩೮೪ ೫೨೯

ಅಕ್ಷರ ವಿನ್ಯಾಸ : ದುರ್ಗಾ ಕಂಪ್ಯೂಟರ್ಸ್, ಬೆಂಗಳೂರು.

ಮುದ್ರಣ : ವೈಭವಿ ಗ್ರಾಫಿಕ್ಸ್, ಬೆಂಗಳೂರು.

ಶ್ರೀ ಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥ ಮಠ



ಶ್ರೀ ರಘುಪ್ರಿಯತೀರ್ಥರ

## ಆಶೀರ್ವಚನ

ಮೂರು ವರ್ಷಗಳ ಹಿಂದೆ "ಹರಿದಾಸರು ಹಾಡಿ ಹೊಗಳಿದ ಶ್ರೀ ವಾದಿರಾಜರು" ಎಂಬ ಕೃತಿಯನ್ನು ಸಂಪಾದಿಸಿ ಹೊರತಂದ ಶ್ರೀ ಶ್ರೀನಿವಾಸ ಹಾವನೂರರು ಅದೇ ಮಾದರಿಯಲ್ಲಿ ಶ್ರೀ ಸತ್ಯಬೋಧರನ್ನು ಸ್ತುತಿಸಿದ ಹರಿದಾಸರ ಹಾಡುಗಳುಳ್ಳ ಸಂಕಲನವನ್ನು ಸಿದ್ಧಪಡಿಸಿ ಶ್ರೀಹರಿ ಗುರುಗಳ ವಿಶೇಷ ಅನುಗ್ರಹಕ್ಕೆ ಪಾತ್ರರಾಗಿರುತ್ತಾರೆ.

ಇಲ್ಲಿಯ ವೈಶಿಷ್ಟ್ಯಪೂರ್ಣ ಹಾಡುಗಳನ್ನು ಪರಿಶ್ರಮಪಟ್ಟು ಶೋಧಿಸಿದ್ದರ ಜೊತೆಗೆ ಶ್ರೀಗಳವರ ಚರಿತ್ರೆಯನ್ನೂ ಹರಿದಾಸರುಗಳ ಪರಿಚಯವನ್ನೂ ಕೊಟ್ಟಿರುವುದು ನಮಗೆ ಸಂತೋಷವುಂಟು ಮಾಡಿದೆ. ಜೊತೆಗೆ ಸವಣೂರ ಮಠದ ವಿವಿಧ ಚಿತ್ರಗಳನ್ನೂ ಸಕಲ ಭಕ್ತರಿಗೆ ಒದಗಿಸಿದ್ದಾರೆ. ಇಂಥ ಅಮೌಲ್ಯವಾದ ಗ್ರಂಥವನ್ನು ಪ್ರಕಾಶನ ಮಾಡಿದ ಹಾವನೂರಿನ ಗಲಗಲಿ ಬಂಧುಗಳಿಗೆ ನಮ್ಮ ಉಪಾಸ್ಯಮೂರ್ತಿಯಾದ ಶ್ರೀ ವೈಕುಂಠರಾಮದೇವರು ಇನ್ನೂ ಹೆಚ್ಚಿನ ಸೇವೆ ಮಾಡಲಿಕ್ಕೆ ಶಕ್ತಿಯನ್ನು ದಯಪಾಲಿಸಲಿ ಅಂತಾ ಪ್ರಾರ್ಥಿಸುತ್ತೇವೆ.

ಶಿವಮೊಗ್ಗ, ಇಂತೀ ಶ್ರೀಮನ್ನಾರಾಯಣ ಸ್ಮರಣೆಗಳು
೨೮-೨-೨೦೦೧

## ಪ್ರಸ್ತಾವನೆ

ಸೋದೆಯ ಶ್ರೀ ವಾದಿರಾಜರನ್ನು ಕುರಿತ ಹಾಡುಗಳ ಸಂಗ್ರಹವೊಂದನ್ನು ೧೯೯೮ರಲ್ಲಿ ಹೊರತರಲಾಯಿತು. ಅದೇ ಮಾದರಿಯಲ್ಲಿ ಸಿದ್ಧವಾದ, ಸವಣೂರಿನ ಶ್ರೀ ಸತ್ಯಬೋಧರನ್ನು ಸ್ತುತಿಸಿದಂಥ ಹಾಡುಗಳು ಇಲ್ಲಿವೆ.

ಈ ಮೊದಲು ಸುಮಾರು ಇಪ್ಪತ್ತು ಹಾಡುಗಳಷ್ಟೆ ಮುದ್ರಿತಗೊಂಡಿದ್ದವು. ಈಗ ಶ್ರೀಗಳವರನ್ನು ಸ್ತುತಿಸಿದ, ೧೮ ಜನ ಹರಿದಾಸರ ವಿವಿಧ ಬಗೆಯ ೪೦ ಹಾಡುಗಳನ್ನು ಒಂದೆಡೆ ತಂದದ್ದಾಗಿದೆ. ಇದರ ಹೊಳಹನ್ನು ಹಾಕುವಲ್ಲಿ, ಮಾಹಿತಿಯನ್ನು ಒದಗಿಸುವಲ್ಲಿ ಮಿತ್ರ ಶ್ರೀ ಗೋವಿಂದಮೂರ್ತಿ ದೇಸಾಯಿಯವರು ವಿಶೇಷವಾಗಿ ನೆರವಾಗಿದ್ದಾರೆ. ಶ್ರೀ ಮೋಹನ ರಾಯಚೂರರಂತೂ ಕೈಗೆ ದೊರೆತಂತೆಲ್ಲ ಕೆಲವು ಅಪೂರ್ವ ಹಾಡುಗಳನ್ನು ತಂದುಕೊಡುವ ಒಲವನ್ನು ತೋರಿದರು. ಪ್ರತಿ ಮಾಡುವಲ್ಲಿ ನೆರವಾದ ಶ್ರೀ ಬಿ.ರಮಾನಾಥರನ್ನೂ ನಾನು ನೆನೆಯಬೇಕು. ಓಹ್ ಚಿತ್ರಗಳು! ಅವನ್ನು ಒದಗಿಸಿದವರು ಶ್ರೀ ಎ.ಜಯತೀರ್ಥ ಹಾಗೂ ಶ್ರೀಮತಿ ಜ್ಯೋತಿ ರಾಘವೇಂದ್ರರಾವ್ ಅವರು. ಅದರಿಂದ ಪುಸ್ತಕಕ್ಕೆ ಅಪಾರ ಶೋಭೆಯುಂಟಾಗಿದೆ.

ಇದನ್ನು ಹೊರತರುವಲ್ಲಿ ಒಂದಿಷ್ಟು ಆರ್ಥಿಕ ಸಹಾಯವನ್ನು ನೀಡಿದ, ಅಮೆರಿಕವಾಸಿ ಶ್ರೀ ಕೆ.ಮುರಲೀಧರ ಹಾಗೂ ದಿ.ಸುಬ್ಬರಾವ ಯಲವಿಗಿ ಅವರ ಸ್ಮರಣಾರ್ಥ ಶ್ರೀ ವಿ.ಎಸ್. ಯಲವಿಗಿ ಇವರುಗಳ ನಿರ್ವ್ಯಾಜ ಗುರುಭಕ್ತಿಯು ಮೆಚ್ಚುವಂತಹದು. ಅದರಿಂದ ಪುಸ್ತಕದ ಬೆಲೆಯನ್ನು ಕಡಿಮೆ ಮಾಡಲು ಸಾಧ್ಯವಾಯಿತು.

ಇದರ ಡಿಟಿಪಿ ಕಾರ್ಯದಲ್ಲಿ ಅವ್ಯಾಹತವಾಗಿ ಶ್ರಮಿಸಿದ ಶ್ರೀಮತಿ ನಿರ್ಮಲಾ ಗಣೇಶ್ ಅವರಿಗೂ, ಆಸ್ಥೆಯಿಂದ ಸೊಗಸಾಗಿ ಮುದ್ರಿಸಿದ ಶ್ರೀ ರಮೇಶ್ ಅವರಿಗೂ ಮನಃಪೂರ್ವಕ ಕೃತಜ್ಞತೆ ಸಲ್ಲಿಸುವೆ.

೧೦ ಮಾರ್ಚ್, ೨೦೦೧ **ಶ್ರೀನಿವಾಸ ಹಾವನೂರ**

ಹರಿದಾಸ ಮಾಹಿತಿ ಸಂಚಯನ, ಬೆಂಗಳೂರು.

# ಪರಿವಿಡಿ



# ಹಾಡುಗಳ ಪರಿವಿಡಿ

ವ್ಯಾಸವಿಠಲ (ಕಲ್ಲೂರ ಸುಬ್ರಹ್ಮಣ್ಯದಾಸರು)

೭. ಮರೆಯದಿರು ಮೂಲರಾಮಾ

ಶ್ರೀದವಿಠಲ (ಕರ್ಜಗಿ ದಾಸಪ್ಪ)

೮. ನಂಬಿದೆ ನಿನ್ನ ಶ್ರೀಗುರುಪೂರ್ಣ

ವೆಂಕಟವಿಠಲ (ಹೊನ್ನಾಳಿ ವೆಂಕಟದಾಸರು)

೯. ಸತ್ಯಬೋಧರಾಯಾ ಪಾಲಿಸು ಭೃತ್ಯಜನರ ಪ್ರೀಯಾ

## ಆ. ೧೯/೨೦ನೆಯ ಶತಮಾನದವರು

ಉಡುಪಿ ಕೃಷ್ಣ

೧೦. ಭಜಸಿ ಬದುಕುವೆನು ಯತಿವರರಾಗಿಹ

ಕಾರ್ಪರ ನರಹರಿ (ಕೊಪ್ಪರ ಗಿರಿಯಾಚಾರ್ಯ)

೧೧. ಭಕುತಿ ಪಾಲಿಸೊ ವಿರಕ್ತಿ ಕರುಣಿಸೊ

ಗುರುಗೋವಿಂದವಿಠಲ (ಎಂ.ಆರ್.ಗೋವಿಂದರಾವ್)

೧೨. ನೋಡಿದೆ ಗುರುವರರ ನಾ ನೋಡಿದೆ

ತಂದೆವರದಗೋಪಾಲವಿಠಲ (ಕಳಸದ ಶ್ರೀನಿವಾಸಗೌಡ)

೧೩. ಕುರುಡನಿಗೆ ಕರವಿತ್ತು ಕೈಪಿಡಿದು ಕಾಯೊ

ನರಸಿಂಹವಿಠಲ (ಕುಂಚೂರು ಹನುಮಂತಾಚಾರ್ಯ)

೧೪. ನಿಂದಿಸೋರಿಗೆ ನಿಂದೆಯನು ಕೊಡುವಾ

೧೫. ಬೋಧರ ನೋಡಿರ್ರೈ ಸತ್ಯಬೋಧರ

೧೬. ಸತ್ಯಬೋಧ ಸದ್ಗುರುವರ ಪಾಲಿಸು

ಭೀಮೇಶಕೃಷ್ಣ (ಹರಪನಹಳ್ಳಿ ಭೀಮವ್ವ)

೧೭. ಸತ್ಯಬೋಧರು ಭಕ್ತಪ್ರೀಯರ

ಸುಶೀಲೇಂದ್ರ ಹ. ಮುಂಡರಗಿ

೩೧. ಸುಪ್ರಭಾತ ನಿಮಗೆ

ಸು..ರಂ. ಎಕ್ಕುಂಡಿ

೩೨. ಕೋದಂಡವ ಹೆಗಲಿಗೇರಿಸಿ

ವರಹವಿಠಲ

೩೩. ರಥವಾನೇರಿದಾ ಸತ್ಯಬೋಧಾ

೩೪. ಸತ್ಯಬೋಧರಾಯಾ ಏನೊ ನಿಮ್ಮ ಮಾಯಾ

ಬಾದರಾಯಣ ಸೇವಕ

೩೫ ಸ್ವಾಮಿ ಲಾಲಿ ಸತ್ಯಬೋಧ ಲಾಲಿ

ಅನಂತವಿಠಲ

೩೬. ಪೋಷಿಸೊ ಸತ್ಯಬೋಧ ಗುರುತೀರ್ಥ

## ( ಚರಿತ್ರಾತ್ಮಕ ದೀರ್ಘ ಕೃತಿಗಳು )

ಪ್ರಸನ್ನ ಶ್ರೀನಿವಾಸದಾಸರು

೩೭. ಸತ್ಯಬೋಧತೀರ್ಥ ಚರಿತೆ

ಕೇಶವಾಚಾರ್ಯ ಕಟ್ಟಿ

೩೮. ಶ್ರೀ ಸತ್ಯಬೋಧತೀರ್ಥರ ಚರಿತೆ

ಶಿವರಾವ ಡಬೀರ

೩೯. ಪ್ರಭಾವ ಕುಸುಮಾಂಜಲಿ

-----



ಶ್ರೀ ಸತ್ಯಬೋಧರ ಮೂಲ ವೃಂದಾವನ



ಶ್ರೀಮಠದ ಪೂಜಾದೈವತ ಶ್ರೀ ನರಸಿಂಹ



ಶ್ರೀಗಳಿಂದ ಪ್ರಸ್ಥಾಪಿತವಾದ ವಿಠ್ಠಲದೇವರು





ಶ್ರೀಗಳವರ ಮುದ್ರಿಕೆಯ ನಾಣ್ಯ



ದಿವಾನ ಖಂಡೇರಾಯನ ಕಲ್ಲಿನ ಮೂರ್ತಿ



ವಿಷ್ಣುತೀರ್ಥ ( ಗಂಗೆಯು ಉದ್ಭವಿಸಿದ ಸ್ಥಳ )

# ೧. ಅಗ್ರಮಾನ್ಯ ಶ್ರೀ ಸತ್ಯಬೋಧರು

ಇಲ್ಲಿ ಸಂಗ್ರಹಿಸಿರುವ ಹರಿದಾಸರ ಹಾಡುಗಳಲ್ಲಿ ಶ್ರೀ ಸತ್ಯಬೋಧರ ಚರಿತ್ರೆಯ ಎಲ್ಲ ವಿವರಗಳು ಬಂದೇ ಇರುವುದರಿಂದ, ಅವರ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಕೊಡಬಯಸಿದೆ.

ಶ್ರೀ ಸತ್ಯಬೋಧರ ಪೂರ್ವಾಶ್ರಮದ ಹೆಸರು ರಾಮಾಚಾರ್ಯರು. ತಂದೆ ಹರಿಯಾಚಾರ್ಯರು; ತಾಯಿ ಅರಳಮ್ಮ. ರಾಯಚೂರವಾಸಿಯಾದ ಹರಿಯಾಚಾರ್ಯರಿಗೆ ಏಳು ಜನ ಮಕ್ಕಳು. ರಾಮಾಚಾರ್ಯರು ಆರನೆಯವರು. ಜನನ ಕ್ರಿ.ಶ. ೧೭೧೦ರಲ್ಲಿ.

ಮಗನ ಉಪನಯನವಾದೊಡನೆ ಹರಿಯಾಚಾರ್ಯರು ಆಗಿನ ಉತ್ತರಾದಿಮಠದ ಶ್ರೀ ಸತ್ಯಪ್ರಿಯರಲ್ಲಿ, ವ್ಯಾಸಂಗಕ್ಕೆಂದು ರಾಮಾಚಾರ್ಯರನ್ನು ಕರೆತಂದರು. ಶ್ರೀಗಳವರು ಅವನನ್ನು ತಮ್ಮ ಬಳಿ ಇರಿಸಿಕೊಂಡು ಸಚ್ಛಾಸ್ತ್ರ ಪಾರಂಗತನನ್ನಾಗಿ ಮಾಡಿದರು. ವಯಸ್ಸಿಗೆ ಬಂದ ರಾಮಾಚಾರ್ಯರಿಗೆ ಸವಣೂರಿನ ಓರ್ವ ಸದ್ವೈಷ್ಣವರು ತಮ್ಮ ಮಗಳು ಗಿರಿಯಮ್ಮನನ್ನು ಧಾರೆಯೆರೆದು ಕೊಟ್ಟರು.

ಆಮೇಲೆ ರಾಮಾಚಾರ್ಯರು ರಾಯಚೂರಿಗೆ ಬಂದು ನೆಲೆಸಿದರು. ಓರ್ವ ಮಗನೂ ಜನಿಸಿದ. ಗಿರಿಯಮ್ಮ ಎರಡನೆಯ ಮಗುವಿನ ಗರ್ಭಿಣಿ. ಆಗ ಸತ್ಯಪ್ರಿಯರಿಂದ ಅವಸರದ ಕರೆ ಬಂದಿತು. ಅವರ ಅಣತಿಯ ಮೇರೆಗೆ ರಾಮಾಚಾರ್ಯರು ಸನ್ಯಾಸಾಶ್ರಮ ಸ್ವೀಕರಿಸಿದರು. ಗುರುಗಳೊಡನೆ ಸಂಚಾರದಲ್ಲಿದ್ದರು. ಎರಡು ವರ್ಷ ಗತಿಸಿದುವು. ಶ್ರೀಸತ್ಯಪ್ರಿಯರು ಅಸು ನೀಗಿದರು. ರಾಮಾಚಾರ್ಯರು ಸತ್ಯಬೋಧ ಎಂಬ ನಾಮಧೇಯದಿಂದ ಉತ್ತರಾದಿಮಠದ

ಪೀಠಾರೋಹಣ ಮಾಡಿದರು; ವರ್ಷ ೧೭೪೪. ತಮ್ಮ ಗುರುಗಳ ವೃಂದಾವನವನ್ನು ಮಾನಾಮದುರೈ ಎಂಬಲ್ಲಿ ನಿರ್ಮಿಸಿ ರಾಮೇಶ್ವರದತ್ತ ಸಂಚಾರಕ್ಕೆ ಹೊರಟರು. ತಮಿಳುನಾಡಿನ ಆ ದಕ್ಷಿಣ ಪ್ರದೇಶದಲ್ಲಿ ನವಾಬರುಗಳು, ಮರಾಠರು, ಮಾಂಡಲಿಕರು ಮುಂತಾದವರಲ್ಲಿ ಕಾಲಕಾಲಕ್ಕೆ ಸಂಘರ್ಷಗಳು ನಡೆದೇ ಇದ್ದುವು. ಶ್ರೀಗಳು ರಾಮೇಶ್ವರದಿಂದ ಹಿಂತಿರುಗಬೇಕೆನ್ನುವಾಗ ಅಲ್ಲಿಯ ಮಾಂಡಲಿಕ ಅವರನ್ನು ತಡೆದನು. ಇತ್ತ ಆ ಮುಂಚೆ ನಿಜಾಮನ ವಶದಲ್ಲಿದ್ದ ತ್ರಿಚನಾಪಳ್ಳಿಯನ್ನು ಮುರಾರಿರಾವ್ ಘೋರ್ಪಡೆ ಹಿಡಿದುಕೊಂಡಿದ್ದನು. ಅಲ್ಲಿಂದ ಅವನನ್ನು ಉಚ್ಚಾಟಿಸಲು ಶ್ರೀಗಳ ಮಧ್ಯಸ್ಥಿಕೆಯನ್ನು ಕೋರಲಾಯಿತು. ಇದಕ್ಕಾಗಿ ಓಡಾಡಿದವ ಶ್ರೀಮಠದ ಭಕ್ತನಾದ ಜಾನೋಜಿ ನಿಂಬಾಳಕರ ಎಂಬಾತ. ಮುರಾರಿಯೇನೊ ತ್ರಿಚನಾಪಳ್ಳಿಯನ್ನು ತೆರವು ಮಾಡಿದ. ಶ್ರೀಗಳವರ ಮೇಲಿನ ಬಂಧನವೂ ದೂರವಾಯಿತು. ತ್ರಿಚನಾಪಳ್ಳಿಗೆ ಜಾನೋಜಿಯ ವಿನಂತಿಯ ಮೇರೆಗೆ ಬಂದದ್ದಾಯಿತು. ಆದರೆ ಅದೇ ನಿಜಾಮನ ಸೈನಿಕರು ಶ್ರೀಮಠದಲ್ಲಿ ತುಂಬಾ ಸಂಪತ್ತಿರಬೇಕೆಂದು ದೋಚತೊಡಗಿದರು! ಇದನ್ನು ಅರಿತ ಶ್ರೀಗಳವರು ರಾಮದೇವರ, ಮತ್ತಿತರ ಪೂಜಾದೈವತಗಳನ್ನು ಬೇರೆಡೆ ಕಳಿಸಿದರು. ಅದರಿಂದ ರಾಮದೇವರಿಗೆ ಪೂಜೆ ಇಲ್ಲದಾಯಿತು. ಒಂದಲ್ಲ, ಒಂಬತ್ತು ದಿನ! ಶ್ರೀ ಸತ್ಯಬೋಧರದು ಅಖಂಡ ಉಪವಾಸ. ನ್ಯಾಯಕ್ಕಾಗಿ ಆಗ್ರಹ, ಉಪವಾಸ ಇತ್ಯಾದಿ ಮಾತುಗಳನ್ನು ಗಾಂಧೀಜಿ ನಿಮಿತ್ತವಾಗಿ ತಿಳಿದಿದ್ದೇವೆ. ಅನ್ಯಾಯದ ರೀತಿಯ ನಡಾವಳಿಯನ್ನು ಪ್ರತಿಭಟಿಸಿ ಶ್ರೀಗಳು ಮಾಡಿದ ಉಪವಾಸ ಈ ಬಗೆಯಲ್ಲಿ ಮೊದಲಿನದು ಎನ್ನಬಹುದೇ ?

ಇತ್ತ ಸೈನ್ಯದಲ್ಲಿ ಏನೊ ಒಂದು ವಿಶಿಷ್ಟ ರೋಗ ಹಬ್ಬಿದ್ದಿತು. ಅಲ್ಲಿಯ ಮುಖಂಡ ಪಶ್ಚಾತ್ತಾಪಬಟ್ಟು ಸತ್ಯಬೋಧರಲ್ಲಿ ಬಂದು ಉಪವಾಸ ನಿಲ್ಲಿಸಲು ಕೇಳಿಕೊಂಡ. (ಉಪೋಷಣೆಗಾಗಿ ಮಾವಿನ ಹಣ್ಣುಗಳನ್ನು ತಂದುಕೊಟ್ಟನಂತೆ.) ಆ ಮುಂದೆ ಮೂಲರಾಮದೇವರೂ ಬಂದರು. ಸೈನ್ಯದ ಭಾವಣಿಯಲ್ಲೇ ಪೂಜಾಸಂಭ್ರಮ ನೆರವೇರಿತು.

ಅಲ್ಲಿಂದ (೧೭೪೫-) ಶ್ರೀಗಳವರು ನಿರಾಂತಕವಾಗಿ ದಕ್ಷಿಣ ಭಾರತದ ಹಲವಾರು ಊರುಗಳಲ್ಲಿ ಸಂಚರಿಸಿದರು. ತಂಜಾವೂರು, ಕುಂಭಕೋಣಂ, ಚಿದಂಬರಂ, ಶ್ರೀಮುಷ್ಣ, ವೃದ್ಧಾಚಲ, ಪಾಂಡಿಚೇರಿ, ಜಿಂಜಿ, ಆರಣಿ (ಸತ್ಯವಿಜಯರ ವೃಂದಾವನ ಸ್ಥಳ), ಆರ್ಕಾಟ, ತಿರುವಂತನಪುರ, ಏನೆಲ್ಲ. ಹೋದಲ್ಲೆಲ್ಲ ಸ್ವಧರ್ಮಪ್ರಸಾರ ಮಾಡಿದರು. ಹೇರಳ ಕಾಣಿಕೆಗಳನ್ನು ಪಡೆದರು. ಮಠದ ಭೌತಿಕ ಸಿರಿವಂತಿಕೆಯನ್ನು ಹೆಚ್ಚಿಸಿದರು. ಜೊತೆಗೆ ಪಾಂಡಿತ್ಯದ್ದೂ.

ಮರಳಿ ತಂಜಾವೂರಿಗೆ ಬಂದಾಗ, ಅಲ್ಲಿಯ ರಾಜಗುರು ಸೇತುಗೋಸ್ವಾಮಿ ಎಂಬವನು ಕಿರುಕುಳ ಕೊಡತೊಡಗಿದ. ತನ್ನ ಅದ್ವೈತ ಪಂಡಿತರನ್ನು ಕರೆತಂದ. ಅವರೆಲ್ಲ ಶ್ರೀಗಳವರೊಡನೆ ವಾದಹಾಕಿ ಸೋತರು. ಮೊದಲಿಗೆ ಈ ಸೇತುಭಾವನ ಚಾಡಿಯ ಮಾತನ್ನು ಕೇಳಿ ಅಲ್ಲಿಯ ರಾಜನು ಶ್ರೀಗಳಿಗೆ ತೊಂದರೆ ಕೊಡಲೆಂದ. ಆದರೆ ತನ್ನ ತಪ್ಪು ತಿಳಿದು ಕ್ಷಮೆ ಕೇಳಿದನಲ್ಲದೆ ಸೇತುಗೋಸ್ವಾಮಿಗೂ ಹಾಗೆ ಮಾಡ ಹೇಳಿದ. ಆದರೂ ಅವನ ಹೊಟ್ಟೆಕಿಚ್ಚು ಹೋಗಿರಲಿಲ್ಲ. ಕೊನೆಗೆ ಅವನನ್ನು ರಾಜಗುರು ಪದವಿಯಿಂದ ತೆಗೆದು ಹಾಕಲಾಯಿತು.

ಆ ಮುಂದೆ ಶ್ರೀಗಳು ತಿರುಪತಿಗೆ ಹೋಗಿ ತಿಮ್ಮಪ್ಪನ ದರ್ಶನ ಪಡೆದರು. ಮುಂದಿನ ಸಂಚಾರದಲ್ಲಿ ಕಡಪಾ, ಗದ್ವಾಲ್ ದಾಟಿ ಹೈದರಾಬಾದಿಗೆ ಬಂದರು. ಎಲ್ಲೆಲ್ಲಿಯೂ ಮಾಧ್ವ ಶಿಷ್ಯರ ಸಂಭ್ರಮ ಮೇರೆವರಿದು ಹರಿಯಿತು.

ಹೈದರಾಬಾದಿನಿಂದ ಶ್ರೀಗಳು ಪಶ್ಚಿಮಕ್ಕೆ, ಈಗಿನ ಮಹಾರಾಷ್ಟ್ರದ ಗಡಿಯಲ್ಲಿ ಪ್ರವೇಶಿಸಿದರು. ಸೊನ್ನಿ, ಗುರುಮಟ್‌ಕಲ್ಲು ಇತ್ಯಾದಿ. ಈ ಪರಿಸರದಲ್ಲಿಯೇ ಸುಪ್ರಸಿದ್ಧ ನಾನಾಸಾಹೇಬ ಪೇಶ್ವೆಯನ್ನು ಭೆಟ್ಟಿಯಾದದ್ದು. ತನ್ನ ಸೈನ್ಯದ ಠಾಣೆಯಲ್ಲಿಯೆ ಪೂಜೆ, ಸತ್ಕಾರಾದಿ ಜರುಗಿಸಿದನು. ಈ ಸುದೀರ್ಘ ಸಂಚಾರತ್ತೇನ ಏಳೆಂಟು ವರ್ಷಗಳೇ ಸಂದಿದ್ದವು. ಶ್ರೀ ಸತ್ಯಬೋಧರ ಪಾಂಡಿತ್ಯ, ವೈರಾಗ್ಯ, ಸಮಚಿತ್ತ

ಮತ್ತು ಸಹನೆ, ಜೊತೆಗೆ ಜನಾನುರಾಗ ಈ ಗುಣಗಳು ಎಲ್ಲೆಲ್ಲಿಯೂ ಹೆಸರು ಮಾಡಿದವು.

ಅಲ್ಲಿಂದ ಶ್ರೀಗಳು ತಮ್ಮ ಹುಟ್ಟೂರಾದ ರಾಯಚೂರಿಗೆ ಬಂದರು. ಮುಂದಿನ ವಾಸ್ತವ್ಯ ಪಾವಟೂರು ಎಂಬಲ್ಲಿ, ಅದೇನು ನಿಮಿತ್ತವೋ ಐದಾರು ವರ್ಷ ಕಳೆದರೆಂದು ಹೇಳಲಾಗಿದೆ. ಅಲಂಪುರ ಎನ್ನುವುದು ಅವರು ಸಂದರ್ಶಿಸಿದ ಇನ್ನೊಂದು ಸ್ಥಳ. ಮರಳಿ ಹೈದ್ರಾಬಾದಿಗೆ ಬಂದರು. ಇಲ್ಲಿ ಇದ್ದಾಗಲೇ ರಾಮದೇವರಿಗೆಂದು ಒಂದು ಸುಂದರ ಬೆಳ್ಳಿಯ ಮಂಟಪವನ್ನು ಮಾಡಿಸಿದರು.

ಅನಂತರದ ಅವರ ಸಂದರ್ಶನ ಸ್ಥಳಗಳೆಂದು ಸುರಪುರ, ಗಜೇಂದ್ರಗಡ, ಕನಕಗಿರಿ, ರಾಯದುರ್ಗ, ಗುತ್ತಿ ಇವನ್ನು ಹೆಸರಿಸಬೇಕು. ಗುತ್ತಿಯಲ್ಲಿಯೇ ಪೂರ್ವೋಕ್ತ ಮುರಾರಿರಾವ ಘೋರ್ಪಡೆ ಇರುತ್ತಿದ್ದು, ಶ್ರೀಗಳವರನ್ನು ವಿಶೇಷವಾಗಿ ಸನ್ಮಾನಿಸಿದನು. ತಿಳಿಯಬೇಕಾದ ಮಾತೆಂದರೆ ಶ್ರೀಗಳು ಸಂಚಾರ ಹೋದಲ್ಲೆಲ್ಲ ಮಾಧ್ವರು ಮಾತ್ರವಲ್ಲ, ಅನ್ಯಜಾತಿ-ಪಂಥಗಳವರೂ, ನವಾಬರುಗಳೂ ಅವರಿಗೆ ವಿಶೇಷ ಮರ್ಯಾದೆ ಸಲ್ಲಿಸುತ್ತಿದ್ದರು. ಅಂಥ ಮಹಾನ್ ವ್ಯಕ್ತಿತ್ವ ಅವರದಾಗಿತ್ತು. ಮತ್ತೆ ೮-೧೦ ವರ್ಷಗಳು ಸಂದಿರಬೇಕು. ಸಂಚಾರತ್ವೇನ ಹರಿಹರಕ್ಕೆ ಬಂದರು (ವರ್ಷ ೧೭೬೭.)

ಅಲ್ಲಿಗೆ ಖಂಡೇರಾಯ ಬಂದು ತಮ್ಮ ಸವಣೂರಿಗೆ ಬರಬೇಕೆಂದು ವಿನಂತಿಸಿದನು. ಇದಕ್ಕೂ ಕೆಲ ವರ್ಷ ಮುಂಚೆ ಅವನ ಭೆಟ್ಟಿಯಾಗಿದ್ದಿತು ಈ ವೇಳೆಗೆ ಆತ ಸಾಮಾನ್ಯ ಅಧಿಕಾರದಿಂದ ಸವಣೂರಿನ ದಿವಾನ ಪದವಿಗೆ ಏರಿದ್ದ; ಶ್ರೀಗಳವರ ಶ್ರೀರಕ್ಷೆಯೇ ಕಾರಣವೆಂದು ಬಗೆದಿದ್ದ. ಅಂತೂ ಅವನ ಕೋರಿಕೆಯನ್ನು ಮನ್ನಿಸಿ ಶ್ರೀಗಳವರು ಸವಣೂರಿಗೆ ಬಂದರು. ಅವರಿಗೆಂದು ಮಠವನ್ನು ಕಟ್ಟಿಸಿಕೊಟ್ಟ. ಸವಣೂರ ನವಾಬನಾದ ಹಕೀಮಖಾನನು ಅವರಿಗೆ ಏನೇನು ಸೌಲಭ್ಯ ಒದಗಿಸಿದ ಅದಾವ ರೀತಿಯಲ್ಲಿ ತನ್ನ ಗೌರವ ಸಲ್ಲಿಸಿದನೆಂಬುದಕ್ಕೆ ಐತಿಹಾಸಿಕ

ಆಧಾರಗಳಿಲ್ಲ. ಇಷ್ಟು ಮಾತ್ರ ನಿಜ; ಶ್ರೀಗಳವರ ಯಾವುದೇ ಚಟುವಟಿಕೆಗೆ ಅಡೆತಡೆಯನ್ನು ತರಲೇ ಇಲ್ಲ. ಇದಕ್ಕೆ ಖಂಡೇರಾಯನೇ ನಿಮಿತ್ತನೆಂಬುದು ಸ್ಪಷ್ಟ.

ಉತ್ತರಾದಿಮಠದ ಪರಂಪರೆಯೇ ಎಂಬಂತೆ ಶ್ರೀಗಳವರು ಅನೇಕ ವರ್ಷ, ಸುಮಾರು ಎರಡು ದಶಕಗಳ ಕಾಲ, ಸಂಚಾರದಲ್ಲಿ ಇದ್ದರು, ಆ ಮುಂದೆ ಸವಣೂರಲ್ಲಿ ಬಹುಮಟ್ಟಿಗೆ ಸ್ಥಾಯಿಯಾಗಿ ನಿಂತರು. ಖಂಡೇರಾಯನು ಅವರ ವಿಶಾಲ ಪರಿವಾರಕ್ಕಾಗಿ ಮಠವನ್ನು ವಿಸ್ತರಿಸಿ ಕೊಟ್ಟ, ಕೆಲಕಾಲದ ಅನಂತರ ವಿಷ್ಣುತೀರ್ಥವೆಂಬ ಭಾವಿ ಸಿದ್ಧವಾಯಿತು ಅವರಿಗಾಗಿ.

ಗಮನಿಸಬೇಕಾದ ಒಂದು ಗಣನೀಯ ಸಂಗತಿಯೆಂದರೆ, ಶ್ರೀಗಳವರ ಈ ಸ್ಥಾಯಿತ್ವದಿಂದಾಗಿ ಅನೇಕ ಮಾಧ್ವ ವಿದ್ವನ್ಮಣಿಗಳು ಸವಣೂರಿಗೆ ಮೇಲಿಂದ ಮೇಲೆ ಬರುವಂತಾದದ್ದು. ಪಾಂಡುರಂಗಿ ಮನೆತನದ ನರಸಿಂಹಾಚಾರ್ಯ ಮತ್ತು ಅಣ್ಣಯ್ಯಾಚಾರ್ಯರು, ಗಾರ್ಲವಾಡ ಶ್ರೀನಿವಾಸಾಚಾರ್ಯರು, ಗಲಗಲಿ ಮುದ್ಗಲಾಚಾರ್ಯರು, ಉಮರ್ಜಿ ಕೃಷ್ಣಾಚಾರ್ಯರು, ಕೊರ್ಲಹಳ್ಳಿ ಮನೆತನಕ್ಕೆ ಸಂಬಂಧಿಸಿದ ರಘುನಾಥಾಚಾರ್ಯರು, ಕಂಚಿ ಶ್ರೀನಿವಾಸಾಚಾರ್ಯರು ಯಾದವಾರ್ಯರ ಪೀಳಿಗೆಯ ಸತ್ಯಾಚಾರ್ಯರು - ಈ ಒಬ್ಬೊಬ್ಬರೂ ಮಧ್ವಶಾಸ್ತ್ರದಲ್ಲಿ ದಿಗ್ಗಜರಾಗಿದ್ದರು. ಅವರೆಲ್ಲರನ್ನು ಆಕರ್ಷಿಸುವಂಥ ಅಗ್ರಮಾನ್ಯತೆ ನಮ್ಮ ಸತ್ಯಬೋಧರಿಗಿದ್ದಿತು. ಇವರುಗಳಿಗೆ, ಇನ್ನೂ ಅನೇಕಾನೇಕ ಸದ್ಬ್ರಾಹ್ಮಣರಿಗೆ ಹೇರಳ ಧನಕನ ಸಲ್ಲುತ್ತಿದ್ದಿತು. ಆದಾಗ್ಯೂ ಮಠದ ಸಿರಿವಂತಿಕೆ ಮುಪ್ಪಾಗದಂತೆ ವಿಜೃಂಭಿಸಿತು.

ಶ್ರೀಗಳವರು ಸವಣೂರಲ್ಲಿದ್ದಾಗ ಕೆಲವು ಅಲೌಕಿಕ ಘಟನೆಗಳು ಜರುಗಿದುವಾಗಿ ಪ್ರತೀತಿ ಇದೆ. ಸಂಕ್ಷೇಪವಾಗಿ ಇಲ್ಲಿ ಕಾಣಿಸುತ್ತೇವೆ.

೧. ಟೀಪೂ ಸುಲ್ತಾನನು ಸವಣೂರಿನ ಮೇಲೆ ದಂಡೆತ್ತಿ

ಬಂದಾಗ, ನವಾಬನಲ್ಲಿ ಅವನು ಕೇಳಿದ ಕಪ್ಪ ಕೊಡಲು ಹಣವಿರಲಿಲ್ಲ. ಶ್ರೀಗಳವರು ತಮ್ಮ ಭಂಡಾರದಿಂದ ನಾಣ್ಯಗಳನ್ನು ತೆಗೆದುಕೊಟ್ಟರು. ಅವರ ಖಾಸ ಮೊಹರನ್ನು ನೋಡಿದ ಟೀಪೂ, ಅದೆಲ್ಲವನ್ನೂ ನಮ್ರಭಾವದಿಂದ ನಿರಾಕರಿಸಿ ತನ್ನ ಕಾಣಿಕೆಯನ್ನು ಸೇರಿಸಿ ಹಿಂತಿರುಗಿಸಿದ. (ಟೀಪೂ ಅಧಿಕಾರ ವಹಿಸಿದ್ದು ೧೭೮೨ರಲ್ಲಿ. ಶ್ರೀಗಳವರು ವೃಂದಾವನಸ್ಥರಾದದ್ದು ೧೭೮೪ರ ಮಾರ್ಚ ತಿಂಗಳಲ್ಲಿ. ಈ ಅವಧಿಯಲ್ಲಿ ಟೀಪೂ ಸುಲ್ತಾನನು ಸವಣೂರಿಗೆ ಮುತ್ತಿಗೆ ಹಾಕಿರಲಿಲ್ಲ. ಆದ್ದರಿಂದ ಈತ ಹೈದರ ಅಲಿ ಇರಬೇಕು.)

೨. ಶ್ರೀ ಸತ್ಯಬೋಧರು ಟಂಕಸಾಲೆಯಲ್ಲಿ ತಮ್ಮದೇ ಆದ ನಾಣ್ಯಗಳನ್ನು ಟಂಕಿಸುತ್ತಿದ್ದರು. ಅವುಗಳಲ್ಲಿ ಕೆಲವು ಈಗಲೂ ಉಳಿದಿವೆ. ಪುರಾತತ್ತ್ವಶಾಸ್ತ್ರದ ತಜ್ಞರಾದ ರಾ.ನರಸಿಂಹಾಚಾರ್ಯರು ೧೯೧೩ರಲ್ಲಿ ಅವನ್ನು ಉಲ್ಲೇಖ ಮಾಡಿದ್ದಾರೆ. ಒಂದು ಬದಿಯಲ್ಲಿ 'ಶ್ರೀ ಸತ್ಯಬೋಧ ಗುರುರಾಜ' ಎಂದೂ ಇನ್ನೊಂದು ಬದಿಯಲ್ಲಿ 'ಗುರುರಾಜೋ ವಿಜಯತೇ' ಎಂದೂ ಕೆತ್ತಿಸಿದೆ. (ನಾಣ್ಯಗಳನ್ನು ಟಂಕಿಸಿದ್ದುದು ನಿಜವೇ. ಆದರೆ ಅವೇನೂ ಚಲಾವಣೆಯ ನಾಣ್ಯಗಳಾಗಿರದೇ ಶ್ರೀಗಳ ದಕ್ಷಿಣೆಯ ರೂಪದಲ್ಲಿ ಕೊಡುತ್ತಿದ್ದ ಕಾಣಿಕೆಗಳಾಗಿದ್ದಿರಬೇಕು.)

೩. ಶ್ರೀ ಸತ್ಯಬೋಧರ ಅಡಿಗೆಯಯವ ಯಾರದೋ ದುರ್ಬೋಧದಿಂದ ವಿಷವನ್ನು ಹಾಕಿದ್ದ. ಅದನ್ನೆ ಶ್ರೀರಾಮದೇವರಿಗೆ ನೈವೇದ್ಯ ಮಾಡಲಾಗಿತ್ತು. ದೇವರಿಗೆ ಅರ್ಪಿತವಾದ ಮೇಲೆ ಯಾವ ಯೋಚನೆ ಮಾಡದೇ, ಹಾಕಿದ್ದು ವಿಷವೆಂದು ತಿಳಿದಿದ್ದರೂ ಶ್ರೀಗಳು ಅದನ್ನು ಸೇವಿಸಿದರು. ಮುಂದೆ ಉದರರೋಗ ಸಂಭವಿಸಲು ವೈದ್ಯರು ಹಗಲು ಊಟ ಮಾಡದೇ ರಾತ್ರಿ ಮಾಡಬೇಕಾಗಿ ಸೂಚಿಸಿದರು. ಅಂದಾಗ ಶ್ರೀರಾಮದೇವರ ಪೂಜೆಯೂ ರಾತ್ರಿಯ ತನಕ ಮುಂದೂಡಬೇಕಾಯಿತು. ಆಮೇಲೆಯೇ ಆಹಾರ ಸ್ವೀಕಾರ. ಕುಹಕಿಗಳು ನಿಂದೆಯ ಮಾತನ್ನಾಡಿದರು. ಅವರಿಗೆ ಪ್ರತ್ಯುತ್ತರವಾಗಿ ಶ್ರೀಗಳವರು

ಮಧ್ಯರಾತ್ರಿಯಲ್ಲಿ ಸೂರ್ಯನು ಆಕಾಶದಲ್ಲಿ ಕಾಣುವ ಹಾಗೆ ಮಾಡಿದರು.

(ಈ ದರ್ಶನವು ಶ್ರೀಗಳವರ ಸಮೀಪಕಾಲೀನ ಸಂಸ್ಕೃತ ಕೃತಿಗಳಲ್ಲಿ ಬಂದಿಲ್ಲ. ಅವರ ಸಮಕಾಲೀನರಾಗಿದ್ದ ಜಗನ್ನಾಥದಾಸರ ಹಾಡುಗಳಲ್ಲಿಯೂ ಇಲ್ಲ. ಸತ್ಯಬೋಧರ ನಿರ್ವಾಣದ ಐವತ್ತು ವರ್ಷಗಳ ಅನಂತರ ಬಾಳಿದ್ದ ವೆಂಕಟವಿಠಲ ಎನ್ನುವವರ ಹಾಡಿನಲ್ಲಿ ಮೊದಲ ಬಾರಿ ಕಾಣಿಸಿಕೊಂಡಿದೆ. ಸುಮಾರು ಅದೇ ಕಾಲದಲ್ಲಿ ರಚಿತವಾದ ಸಂಸ್ಕೃತ ಸ್ತುತಿಯಲ್ಲಿಯೂ ಬಂದಿದೆ.)

೪. ಸವಣೂರಿನ ಓರ್ವ ಮುಸ್ಲಿಂ ಸರದಾರನು ದೊಡ್ಡ ಮನೆಯೊಂದನ್ನು ಕಟ್ಟಿಸಿದ್ದ. ಆದರೆ ಅಲ್ಲೊಂದು ಘಟಸರ್ಪ ಬಂದಿತಾದ್ದರಿಂದ ಹೆದರಿ ಶ್ರೀಗಳವರ ಹತ್ತಿರ ಬಂದ. ಅವರು ಮೂರು ದಿನ ಅಲ್ಲಿಯೇ ದೇವರ ಪೂಜೆ ಮಾಡಿದರು. ಸರ್ಪವು ಪ್ರತಿ ದಿನ ಬಂದು ಅವರು ಕೊಟ್ಟ ಹಾಲನ್ನು ಕುಡಿದು ಹೋಗುತ್ತಿತ್ತು. ಸರ್ಪವು ಓರ್ವ ಬ್ರಾಹ್ಮಣನ ಮೂಲಕ ಮಾಡಿದ, ಸೂಚನೆಯ ಮೇರೆಗೆ ಮೂಲೆಯ ಒಂದು ನೆಲವನ್ನು ಅಗಿಸಲಾಗಿ ೬ ತಪ್ಪೇಲಿಯಷ್ಟು ಧನ-ಕನಕ ಶೋಧವಾಯಿತು. (ಆಗ ಮಠಕ್ಕೆ ದೊರಕಿದ ಅರ್ಧದಷ್ಟು ಬೆಳ್ಳಿ-ಬಂಗಾರದಿಂದ ಶ್ರೀಗಳು ಟಂಕಸಾಲೆ ನಿರ್ಮಿಸಿ ನಾಣ್ಯ ಮಾಡಿಸಿದರೆಂದು ಮರಾಠೀ ಗ್ರಂಥದಲ್ಲಿ ಉಕ್ತವಾಗಿದೆ.)

೫. ಶ್ರೀ ಸತ್ಯಬೋಧತೀರ್ಥರು ಪ್ರವಚನ ಮಾಡುವ ಕಾಲಕ್ಕೆ ಒಂದು ಕಪಿ ಬರುತ್ತಿತ್ತು. ಯಾವ ಸದ್ದು ಮಾಡದೇ ಕುಳಿತಿರುತ್ತಿತ್ತು. ಅವರು ಕೊಡುವ ಹಣ್ಣನ್ನು ತಿನ್ನುತ್ತಿತ್ತು. ತೀರ್ಥ ಸಂಪ್ರೋಕ್ಷಣೆ ಆದ ಮೇಲೆ ಹೊರಟು ಹೋಯಿತು. ಅದು ವಾಯುದೇವರೇ ಎಂದು ಒಂದೆಡೆ ಹೇಳಿಕೆ ಇದ್ದರೆ ಇನ್ನೊಂದೆಡೆ ಪೂರ್ವಜನ್ಮದ ಪಾಪದಿಂದ ಓರ್ವ ಆಚಾರ್ಯರು ಕಪಿಜನ್ಮ ತಾಳಿದ್ದರೆಂದು ಶ್ರೀಗಳವರ ಕೃಪೆಯಿಂದ ಅದು ನೀಗಿತೆಂದೂ ಹೇಳಲಾಗಿದೆ. (ತೀರ ಈಚೆಗೆ ಶ್ರೀ ಬನ್ನಂಜೆ

ಗೋವಿಂದಾಚಾರ್ಯರು ಪ್ರವಚನ ಮಾಡುತ್ತಿದ್ದಾಗ ಎರಡು ದಿನ ಒಂದು ಕಪಿ ಬಂದು, ಏನೂ ಗದ್ದಲ ಮಾಡದೇ ಹೊರಟು ಹೋಯಿತೆಂಬುದನ್ನು ನೆನೆಯಬಹುದು.)

೬. ಶ್ರೀಗಳವರನ್ನು ಡಕಾಯಿತರು ಮುತ್ತಿದ್ದು ಹಾಗೂ ಮಾಂಸದ ಕರಣೆಗಳನ್ನು ಪುಷ್ಪವಾಗಿ ಪರಿವರ್ತಿಸಿದ್ದು ಎಂಬೆರಡು ಘಟನೆಗಳನ್ನು ಇತರ ಕೆಲವು ಯತಿಗಳಿಗೆ ಹೇಳಿದ್ದಂತೆ ಶ್ರೀ ಸತ್ಯಬೋಧರಿಗೂ ಅನ್ವಯಿಸಿದುದು ಪ್ರಚಾರದಲ್ಲಿದೆ.

೭. ಸವಣೂರಿನ ವಿಷ್ಣುತೀರ್ಥದಲ್ಲಿ ಗಂಗೆ ಅವತರಿಸಿದ ಪ್ರಸಂಗ. ಇದು ಮಾತ್ರ ಅವರ ಮೊತ್ತಮೊದಲಿನ ಚರಿತ್ರ ಕೃತಿಯಿಂದ ಈಚಿನವರೆಗೂ ಉಲ್ಲೇಖಗೊಂಡಿದೆ. ಆ ಸಂಗತಿ ಹೀಗಿದೆ : ಹಬ್ಬ-ಹರಿದಿನಗಳಲ್ಲಿ ಶ್ರೀಗಳವರು ಸ್ನಾನಕ್ಕೆಂದು ಆರು ಮೈಲು ದೂರವಿರುವ ವರದಾ ನದಿಗೆ ಹೋಗುತ್ತಿದ್ದರು. ಪಾದಚಾರಿಯಾಗಿ ಅವರು ಹೊರಟಾಗ ಅನೇಕರು ಅವರನ್ನು ಅನುಸರಿಸಿ ಜೊತೆಗಿರುತ್ತಿದ್ದರು. ಅವರಿಗೆಲ್ಲ ಪುರಾಣೋಕ್ತ ಸರಸವಾದ ಕತೆಗಳನ್ನು ಹೇಳುತ್ತಿದ್ದರಂತೆ. ನಿತ್ಯವೂ ಮಠದ ಬಳಿಯಲ್ಲಿರುವ ದೊಡ್ಡ ಬಾವಿಯಲ್ಲಿ ಸ್ನಾನ ಮಾಡುತ್ತಿದ್ದರು. ಒಮ್ಮೆ ಓರ್ವ ಗೃಹಸ್ಥನ ಕನಸಿನಲ್ಲಿ ಭಾಗೀರಥಿಯು ಪ್ರತ್ಯಕ್ಷಳಾಗಿ, ನನ್ನನ್ನೂ ಶ್ರೀಗಳ ಸ್ನಾನದ ಜಾಗಕ್ಕೆ ಕರೆದುಕೊಂಡು ಹೋಗೆಂದು ಹೇಳಿದ ಹಾಗಾಯಿತಂತೆ. ನಿಜ ಸಂಗತಿಯನ್ನು ಅರಿತುಕೊಂಡವರಾಗಿ ಶ್ರೀಗಳು ಅಲ್ಲಿಗೆ ಹೋದಾಗ, ದಂಡೆಯ ಮೇಲಿದ್ದ ಔದುಂಬರ ವೃಕ್ಷದ ಕೆಳದಿಂದ ಅಂತರ್ಜಲವು ಭರದಿಂದ ಉಕ್ಕಿ ಹರಿಯತೊಡಗಿತು. ಶ್ರೀಗಳಾದಿಯಾಗಿ ಎಲ್ಲರೂ ಕೌತುಕಾನಂದದಿಂದ ನೋಡುತ್ತಿದ್ದರು. ಶ್ರೀಗಳು ಮೊದಲಿಗೆ ಸ್ನಾನ ಮಾಡಿದರು. ಸುವಾಸಿನಿಯರು ಗಂಧಪುಷ್ಪಾದಿಗಳಿಂದ ಪೂಜೆಗೈದರು. ಅಂದಿನಿಂದ ಆ ಬಾವಿಗೆ ವಿಷ್ಣುತೀರ್ಥವೆಂಬ ಹೆಸರಾಯಿತು. ಅದಕ್ಕೆ ಸೂಕ್ತವಾದ ಪಾವಟಿಗೆಗಳನ್ನು ನಿರ್ಮಿಸಲಾಯಿತು.

ಶೋಭಕೃತ್ ಸಂವತ್ಸರದ (ಶಕವರ್ಷ ೧೭೦೬) ಫಾಲ್ಗುಣ ವದ್ಯ ಷಷ್ಠಿಯಂದು ಶ್ರೀಗಳಿಗೆ ದೇಹಾಲಸ್ಯ ತೋರಿತು. ಕೆಲದಿನಗಳ ಮುಂಚೆ, ಹಾವೇರಿಯ ರಾಮಾಚಾರ್ಯರೆನ್ನುವವರಿಗೆ ಸತ್ಯಸಂಧರೆಂದು ನಾಮಕರಣ ಮಾಡಿ ಸನ್ಯಾಸಾಶ್ರಮವನ್ನು ಕೊಟ್ಟಿದ್ದರು. ಆ ದಿನ ಬೆಳಿಗ್ಗೆ ಶ್ರೀಗಳು ಸ್ನಾನಮಾಡಿ, ಪ್ರಣವಾದಿ ಮಂತ್ರಗಳನ್ನು ಜಪಿಸುತ್ತ ಬಹಿರ್ವ್ಯಾಪಾರಶೂನ್ಯರಾಗಿ ಪರಮಾತ್ಮನ ಪಾದಾರವಿಂದವನ್ನು ಸೇರಿದರು.

ಶ್ರೀಸತ್ಯಬೋಧರು ಬದುಕಿದ್ದ ಕಾಲವು ಹಲವಾರು ರಾಜಕೀಯ ಸಂಘರ್ಷಗಳಿಂದ ಕೂಡಿದ್ದಿತು. ಶ್ರೀಗಳವರು ತಮ್ಮ ತಪಸ್ಸಿದ್ಧಿಯ ವ್ಯಕ್ತಿತ್ವದಿಂದ ಅವನ್ನು ನಿವಾರಿಸಿ ಯುದ್ಧ ಪ್ರಸಂಗಗಳನ್ನು ತಪ್ಪಿಸಿ ಶಾಂತಿದೂತರಾಗಿ ಕೆಲಸ ಮಾಡಿದರು. ಆಗ ರಾಯರ ಮಠದಲ್ಲಿ, ಮತ್ತಿತರ ಕಡೆಗಳಲ್ಲಿ ಎದ್ದಿದ್ದ ಧಾರ್ಮಿಕ ತಿಕ್ಕಾಟಗಳನ್ನೂ ಅವರು ಸರಿಪಡಿಸಿದರು. ಮಾಧ್ವತತ್ವಜ್ಞಾನದ ಪ್ರಸಾರವನ್ನಂತೂ ಅಖಂಡವಾಗಿ ಕೈಕೊಂಡರು. ಹರಿದಾಸರುಗಳನ್ನು ಮನವಾರೆ ಮೆಚ್ಚಿ ಆತ್ಮೀಯವಾಗಿ ಕಂಡರು. ಧಾರವಾಡ ಪರಿಸರದಲ್ಲಿ ದಾಸವಾಙ್ಮಯದ ಹಬ್ಬುಗೆಗೇ ಅವರೇ ಪ್ರೇರಕರು.

## ೨. ದಾಸವರ್ಯರು ಹಾಗೂ ಅವರ ಕೃತಿಗಳು

ಇಲ್ಲಿರುವ ಹಾಡುಗಳನ್ನು ಈ ರೀತಿ ವಿಭಾಗಿಸಿದೆ;

**ಅ.** ಶ್ರೀಸತ್ಯಬೋಧರ ಸಮಕಾಲೀನರು; ಎಂದರೆ ೧೮ನೆಯ ಶತಮಾನದ ಉತ್ತರಾರ್ಧ ಕಾಲದವರು. ಇವರೆಲ್ಲ ಶ್ರೀವಿಜಯದಾಸರ ಶಿಷ್ಯರು ಮತ್ತು ಪ್ರಶಿಷ್ಯರು; ಶ್ರೀಸತ್ಯಬೋಧರನ್ನು ಕಂಡವರು.

**ಆ.** ೧೯/೨೦ ಶತಮಾನದವರು. ಸವಣೂರಿಗೆ ಆಗಾಗ

ಹೋಗಿ ಬಂದವರು. ಶ್ರೀ ಸತ್ಯಬೋಧರ ಪ್ರಭಾವಲಯ ವಿಸ್ತರಿಸಿದಂತೆಲ್ಲ ಅದನ್ನು ತಮ್ಮ ಕೀರ್ತನೆಗಳಲ್ಲಿ ಬಣ್ಣಿಸಿದರು.

ಇ. ಅನಂತರ ಎಂದರೆ ಇಪ್ಪತ್ತನೆಯ ಶತಮಾನದಲ್ಲಿ ಇನ್ನು ಕೆಲವರು ಶ್ರೀಗಳವರನ್ನು ಸ್ತುತಿಸಿದ್ದಾರೆ. ಆದರೆ ಇವರು ದಾಸದೀಕ್ಷೆಯನ್ನು ವಹಿಸಿದವರಲ್ಲ. ದಾಸಪರಂಪರೆಯಲ್ಲಿಯೇ ಹಾಡು ರಚಿಸಿದ ಲೌಕಿಕರು.

ಈ. ಶ್ರೀ ಸತ್ಯಬೋಧರ ಸಮಗ್ರ ಜೀವನವನ್ನು ಚಿತ್ರಿಸುವ ಕವನಗಳು.

## ಅ. ಸಮಕಾಲೀನರು

### ವಿಜಯದಾಸರು

ಹರಿದಾಸ ಸಾಹಿತ್ಯವನ್ನು ಪುನರುಜ್ಜೀವನಗೊಳಿಸಿದ ವಿಜಯದಾಸರ ಹಾಡಿನಿಂದಲೇ ಈ ಸಂಗ್ರಹ ಮೊದಲಾಗುತ್ತದೆ. ಅವರು ತಮ್ಮ ಹಾಡಿನಲ್ಲಿ ಕಾವ್ಯಸಾಮರ್ಥ್ಯಧೀರರು ಎಂದು ಶ್ರೀಸತ್ಯಬೋಧರನ್ನು ವರ್ಣಿಸಿದ್ದಾರೆ. ಇದರರ್ಥ ಶ್ರೀಪಾದರಾಜಾದಿ ಯತಿಗಳಂತೆ ಇವರೂ ಕೀರ್ತನೆಗಳನ್ನು ರಚಿಸಬಹುದೆ? ಆ ಮುಂದಿನ ಶಿರಿವಿಠಲರ ಹಾಡಿನಲ್ಲಿಯೂ ಸತ್ಯಬೋಧರನ್ನು ಕವಿವರ್ಯ ಎಂದು ವರ್ಣಿಸಿದ್ದಿದೆ.

### ಗೋಪಾಲದಾಸರು

ಗೋಪಾಲದಾಸರ ಕೃತಿರಚನೆಯ ಹಿಂದೆ (ಸಂ.೨) ವಿಶೇಷ ಘಟನೆಯೊಂದಿದೆ. ಒಮ್ಮೆ ರಾಯಚೂರಿಗೆ ಶ್ರೀಗಳು ಆಗಮಿಸಿದಾಗ ಗೋಪಾಲದಾಸರು ತಮ್ಮಿಬ್ಬರ ಬಂಧುಗಳೊಡನೆ ಭೆಟ್ಟಿಯಾದರು. ಶ್ರೀಗಳವರು - ಮೋಜಿಗಾಗಿಯೇ ಇರಬೇಕು - ನೀವು ಒಬ್ಬೊಬ್ಬರು ಒಂದೊಂದು ನುಡಿಯನ್ನು ರಚಿಸಿ ಪೂರ್ತಿ ಹಾಡನ್ನು ಹೇಳಿರಿ

ಎಂದರಂತೆ. ವಿಷಯ ಯಾವುದೂ ಆದೀತು! ಸರಿ, ಶ್ರೀಗಳವರನ್ನೇ ಕುರಿತು ಒಂದೊಂದು ನುಡಿ ರಚಿಸಿದರು. ಪಲ್ಲವಿ ಹಾಗೂ ಕೊನೆಯ ನುಡಿ ಗೋಪಾಲದಾಸರದು. ನಡುವಿನವು ಸೀನಪ್ಪ ಮತ್ತು ದಾಸಪ್ಪ ಅವರ ರಚನೆ. ಹರಿದಾಸತ್ರಯದ ಈ ಸ್ವೋಪಜ್ಞತೆ ಶ್ರೀಗಳವರಿಗೆ ಮೆಚ್ಚಿಕೆಯಾಗಿರಲು ಸಾಕು.

ಈ ಹಾಡಿನಲ್ಲಿ ಸ್ವಾಮಿಗಳು ಕಾಮನ ಮದವನ್ನು ಮರ್ದಿಸಿದ, ಅರ್ಥಾತ್ ಅವರ ಸನ್ಯಾಸದ ವಿಷಯ ಬಂದಿದೆ. ಆಗ ಕಾಮನೊಂದಿಗೆ ಅವರ ಪರಿವಾರವೂ ಪರಾಭವ ಹೊಂದುತ್ತದೆ. ಕ್ರೋಧಾದಿಗಳು (ಕಾಮ, ಕ್ರೋಧ, ಲೋಭ ಇತ್ಯಾದಿ) ಹೆದರಿ ದೂರದಲ್ಲಿ ನಿಂತು ನಮಿಸಿ ನಿರ್ಗಮಿಸುತ್ತವೆ. ಶ್ರೀಗಳವರ ದಾನ ಧರ್ಮ ಮತ್ತೊಂದು ನುಡಿಯಲ್ಲಿ ವ್ಯಕ್ತವಾಗಿದೆ. ಅವರನ್ನು ಕಂಡು ದಾನಶೂರ ಕರ್ಣನು ರವಿಮಂಡಲವನ್ನು ಸೇರುತ್ತಾನೆ. ಇತ್ತ ಅವರ ಪಾಂಡಿತ್ಯಕ್ಕೆ ಶೇಷನು ಶಿರಬಾಗಿ ಪಾತಾಳ ಲೋಕವನ್ನು ಸೇರುತ್ತಾನೆ. ಈ ಮನೋಜ್ಞವಾದ ಕಲ್ಪನೆಗೆ ಕಾವ್ಯಶಾಸ್ತ್ರದಲ್ಲಿ ಕಾವ್ಯಲಿಂಗಾಲಂಕಾರ ಎಂಬ ಹೆಸರಿದೆ.

ಆ ಮುಂದಿನ ಮೋಹನದಾಸರ ಹಾಡಿನಲ್ಲಿಯೂ ಸ್ವಾಮಿಗಳ ಕಠೋರ ಸನ್ಯಾಸದ ಬಗೆ ವರ್ಣಿತವಾಗಿದೆ.

## ಜಗನ್ನಾಥದಾಸರು

ಜಗನ್ನಾಥದಾಸರಿಗೆ ಶ್ರೀಸತ್ಯಬೋಧರ ಮೇಲೆ ಅತೀವ ಗೌರವ ಹಾಗೂ ಮಮತೆ. ಅವರ ನೆನಪಾದಾಗೊಮ್ಮೆ ಸವಣೂರಿಗೆ ಹೋಗಿ ಬರುತ್ತಿದ್ದಂತೆ ಕಾಣುತ್ತದೆ. ಕರ್ಜಗಿಯಲ್ಲಿ ದಾಸಪ್ಪನನ್ನು (ಆ ಮುಂದೆ ಶ್ರೀದವಿಠಲರು) ಕಂಡದ್ದು ಸವಣೂರಿಗೆ ಹೊರಟಿದ್ದಾಗಲೇ, ತಮ್ಮ ಹರಿಕಥಾಮೃತಸಾರವನ್ನು ಶ್ರೀಗಳವರ ಮುಂದೆ ಓದಿ ತೋರಿಸಿರಬೇಕು. ಅಂತೂ ಜಗನ್ನಾಥದಾಸರ ಇಲ್ಲಿಯ ಸ್ತುತಿರೂಪದ ಹಾಡುಗಳನ್ನು ಗಮನಿಸಿದರೆ ಅವರಿಬ್ಬರಲ್ಲಿಯ ಒಡನಾಟ ಆತ್ಮೀಯವಾದದ್ದು ಎನಿಸುವುದು.

'ಪ್ರತಿಗಾಣೆ ನಿಮ್ಮ ಮಹಿಮೆಗೆ ...' ಎಂಬ ಹಾಡಿನಲ್ಲಿ (ಕ್ರಮಾಂಕ ೫) 'ಯವನಪತಿ ಕಪ್ಪವ ಕೊಟ್ಟು ನಮಿಸಿದ' ಎಂಬ ಮಾತಿದೆ. ಈತ ಯಾವ ಸುಲ್ತಾನ ಇದ್ದಿರಬಹುದು? ಜಗನ್ನಾಥದಾಸರು ಹೇಳಿದ ಇನ್ನಿತರ ಘಟನೆಗಳು, ಉದಾಹರಣೆಗೆ ಔದುಂಬರ ವೃಕ್ಷದ ಅಡಿಯಿಂದ ಅಂತರ್ಜಲ ಚಿಮ್ಮಿ ಬಂದದ್ದು ನಿಜವೆಂದೇ ಬಗೆಯತಕ್ಕುದು.

## ವ್ಯಾಸವಿಠಲರು

ಇವರ ನಿಜನಾಮ ಕಲ್ಲೂರ ಸುಬ್ಬಣ್ಣದಾಸರು ಎಂಬುದು. ವಿಜಯದಾಸರ ಪ್ರಶಿಷ್ಯರು. ಇವರಿಗೆ ದಾಸದೀಕ್ಷೆಯನ್ನು ಕೊಟ್ಟವರು ಪಂಗನಾಮ ತಿಮ್ಮಣ್ಣದಾಸರು.

ಇಲ್ಲಿ ಬಂದಿರುವ ಅವರ ಕೀರ್ತನೆ (ಕ್ರ. ೭) ಶ್ರೀರಾಮಚಂದ್ರರಿಗೆ ಸಂಬೋಧಿಸಿದ್ದರೂ, ಪರ್ಯಾಯವಾಗಿ ಸತ್ಯಬೋಧರನ್ನು ಸ್ತುತಿಸುವಂತಿದೆ. "ರಘುರಾಮಾ, ನೀನು ಈ ಹಿಂದೆ ಕಷ್ಟಕಾರ್ಪಣ್ಯಗಳಲ್ಲಿ ಒದ್ದಾಡಿದ್ದೀಯ. ವನವಾಸದಲ್ಲಿದ್ದಾಗ ಬರಿಯ ಹಣ್ಣುಹಂಪಲ ತಿಂದು ಬಾಳಿದವ. ಈಗಲೋ ನಮ್ಮ ಗುರುಗಳು ನಿನಗೆ ನಾನಾ ವಿಧದ ಸುಭೋಜ್ಯಗಳನ್ನು ಅರ್ಪಿಸುತ್ತಿದ್ದಾರೆ. ಆಗ ನೀನು ಸತಿಯನ್ನು ಕಳೆದುಕೊಂಡು ಅಲೆದಾಡಿದ್ದಿ. ಈಗ ಸೀತಾಸಹಿತನಾಗಿ ನಿನ್ನನ್ನು ನಮ್ಮ ಗುರುಗಳು ರತ್ನಖಚಿತಪೀಠದ ಮೇಲೆ ಕೂರಿಸಿದ್ದಾರೆ." ಮುಂದುವರಿದು "ನೀನೀಗ ನಮ್ಮ ಗುರುಗಳ ಬಳಿ ಇರುವಿ; ನಿನ್ನ ಪಡಿಪಾಟಲು ನೀಗಿಹೋಯಿತು" ಎನ್ನುತ್ತಾರೆ ! ಸೊಗಸಾದ ಕಲ್ಪನೆಯಿಂದ ಕೂಡಿದ ಈ ಕೀರ್ತನೆ ಅತ್ಯಂತ ಹೃದ್ಯವಾಗಿದೆ.

ಅಂದ ಹಾಗೆ ಇದರ ಪಲ್ಲವಿಯ ಮೊದಲ ಸಾಲು 'ಮರೆಯದಿರು ಮರೆಯದಿರು ಮೂಲರಾಮ' ಎಂದಿದೆಯಷ್ಟೆ. ಮೂಲರಾಮಾ ಇದರ ಬದಲಿಗೆ 'ಮಾರಮಣನೇ' ಎಂದು

ಸೇರಿಸಿ ಬುದ್ಧಿಪೂರ್ವಕವಾಗಿ (?) ಕೆಲ ಕಡೆ ಮುದ್ರಿಸಿದ್ದಾರೆ. ಎರಡನೆಯ ಸಾಲಿನಲ್ಲಿ ಬರುವ 'ರಘುರಾಮ' ಎಂಬುದನ್ನು ಗಮನಿಸಿದಾಗ 'ಮೂಲರಾಮಾ' ಎನ್ನುವ ಪದವೇ ಸರಿಯಾದದ್ದು.

## ಶ್ರೀದವಿಠಲರು

ಧಾರವಾಡ ಪರಿಸರದ ದಾಸವರ್ಗದಲ್ಲಿ ಇವರೇ ಮೊದಗಲಿರು ಎನ್ನಬಹುದು. (ಸು.೧೭೫೦-೧೮೨೦). ಒಳ್ಳೇ ಕುಸ್ತಿ ಪಟುವಾಗಿ ಐಷಾರಾಮುದಿಂದ ಕಾಲ ಕಳೆಯುತ್ತಿದ್ದಾಗ ಜಗನ್ನಾಥದಾಸರ ದರ್ಶನವಾಯಿತು. ಅಂಕಿತವನ್ನು ಅವರಿಂದಲೇ ಪಡೆದು ಪರಮ ಭಗವದ್ಭಕ್ತರಾಗಿ ಬಾಳಿದರು. ಅನೇಕ ಹಾಡುಗಳನ್ನು ರಚಿಸಿದರು. ಕರ್ಜಗಿಯು ಸವಣೂರಿಗೆ ತೀರ ಹತ್ತಿರದ ಊರು. ಹಲವು ಬಾರಿ ಅಲ್ಲಿಗೆ ಹೋಗಿ ಶ್ರೀಗಳವರನ್ನು ಕಂಡಿರಲು ಸಾಕು. ಇಲ್ಲಿರುವ ಅವರ ಹಾಡು ಆ ಭಾಗದ ಜನಕ್ಕೆ ಪರಿಚಿತವಾದದ್ದು.

ವೆಂಕಟವಿಠಲ ಮುದ್ರಿಕೆಯವರು ಸತ್ಯಬೋಧರ ಜೀವಿತ ಕಾಲದಲ್ಲಿ ಇದ್ದವರಲ್ಲ, ತುಸುವೇ ಅನಂತರದವರು. ಆ ವೇಳೆಗಾಗಲೇ ಶ್ರೀ ಸತ್ಯಬೋಧರಿಂದಾದ ಅಲೌಕಿಕ ಘಟನೆಗಳು - ಉದಾಹರಣೆಗೆ ಗಂಗೆಯ ಉದ್ಭವ, ಮಧ್ಯರಾತ್ರಿ ಸೂರ್ಯಪ್ರಕಾಶ ದರ್ಶನ ಪ್ರಚುರದಲ್ಲಿದ್ದವೆಂದು ಕಾಣುತ್ತದೆ. ಅವನ್ನು ತಮ್ಮ ಹಾಡಿನಲ್ಲಿ ತಂದಿದ್ದಾರೆ (ಕ್ರ. ೬)

## ಆ. ೧೯/೨೦ನೆಯ ಶತಮಾನದವರು

೧೯ ನೆಯ ಶತಮಾನದ ಉತ್ತರಾರ್ಧದಲ್ಲಿ ಹಾಗೂ ೨೦ ನೆಯ ಶತಮಾನದ ಕೊನೆಯ ವರೆಗಿನ ಅವಧಿಯಲ್ಲಿ ಬಾಳಿದ ಅನೇಕ ಹರಿದಾಸರ ಹಾಡುಗಳು ಈ ವಿಭಾಗದಲ್ಲಿ ಬಂದಿವೆ.

ಇವರೆಲ್ಲ ಸವಣೂರಿಗೆ ಹೋಗಿ ವೃಂದಾವನದ ಸಂದರ್ಶನ ಪಡೆದ ನಿಮಿತ್ತದಿಂದ ಕೃತಿರಚನೆ ಮಾಡಿದ್ದಾರೆ ಎಂಬುದನ್ನು ನೆನೆದಿರಬೇಕು.

ಅಕಾರಾದಿ ಕ್ರಮದಲ್ಲಿ ಮೊದಲಿಗೆ ಬಂದ **'ಉಡುಪಿ ಕೃಷ್ಣ'** ಅಂಕಿತದ ಹಲವಾರು ಹಾಡುಗಳು ಅಲ್ಲಲ್ಲಿ ಕಾಣಸಿಗುತ್ತದೆ. ಅವುಗಳಲ್ಲಿ ಇಲ್ಲಿಯದೂ ಒಂದು. ಆದರೆ ಇವರ ನಿಜ ಹೆಸರೇನು, ಎಲ್ಲಿಯವರು ಎಂಬುದು ತಿಳಿದು ಬಂದಿಲ್ಲ.

**'ಕಾರ್ಪರ ನರಹರಿ'** ಇವರು ರಾಯಚೂರು ಜಿಲ್ಲೆಯ ಕೊಪ್ಪರ ಗ್ರಾಮದವರು. ಹೆಸರು ಗಿರಿಯಾಚಾರ್ ಎಂಬುದು. ಕಾಲಮಾನದಿಂದ ತೀರ ಈಚಿನವರು (೧೮೯೯-೧೯೭೯), ತಮ್ಮ ಹಾಡಿನಲ್ಲಿ ( ಕ. ೧೧ ) ಶ್ರೀಸತ್ಯಬೋಧರ ಬಳಿ ಕಪಿಯೊಂದು ಬಂದು ಕುಳಿತಿರುತ್ತಿದ್ದ ಘಟನೆಯನ್ನು ಕಾಣಿಸಿದ್ದಾರೆ. ಪೂರ್ವಜನ್ಮದಲ್ಲಿ ಕೋನೇರಿ ಆಚಾರ್ಯರಾಗಿದ್ದು ಯತಿಗಳ ಕೃಪೆಯಿಂದ ಮುಕ್ತಿಯನ್ನು ಪಡೆದರಂತೆ.

**ಗುರುಗೋವಿಂದವಿಠಲ**ರೂ ಈಚಿನವರೇ (೧೮೯೪-೧೯೮೦) ಪೂರ್ಣ ಹೆಸರು ಎಂ.ಆರ್ ಗೋವಿಂದರಾವ್. ಮೈಸೂರಲ್ಲಿದ್ದುಕೊಂಡು ಹರಿದಾಸರ, ಆ ಸಾಹಿತ್ಯದ ಪ್ರಸರಣ ಕಾರ್ಯದಲ್ಲಿ ಅನನ್ವಿತ ಕೆಲಸ ಮಾಡಿದವರು. ಅನೇಕ ದಾಸ, ಭಗವದ್ಭಕ್ತರುಗಳ ಚರಿತ್ರೆ ಬರೆದಿದ್ದಾರೆ. ಹಾಗೇನೆ ತಂದೆ ಮುದ್ದುಮೋಹನವಿಠಲರಿಂದ ಅಂಕಿತ ಪಡೆದು ಸಾವಿರದಷ್ಟು ಕೀರ್ತನೆಗಳನ್ನು ರಚಿಸಿದ್ದಾರೆ. ಇಲ್ಲಿ ಬಂದಿರುವ ಅವರ ಕೃತಿಯಲ್ಲಿ ( ಕ. ೧೨ ) ಶ್ರೀಗಳಿಗೆ ಸರ್ಪ ಕಾಣಿಸಿಕೊಂಡು ಅದರ ಅಜ್ಞೆಯಿಂದ ಗುಪ್ತ ಧನದ ಪತ್ತೆ ಹಿಡಿದ ಪ್ರಸಂಗ ಉಲ್ಲೇಖಗೊಂಡಿದೆ.

**ತಂದೆವರದಗೋಪಾಲವಿಠಲ**ರು ಚಿಕ್ಕ ವಯಸ್ಸಿನಲ್ಲಿಯೇ ಹರಿದಾಸರಾಗಿ ಬಾಳಿದವರು. ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕಿನ ಕಳಸ ಗ್ರಾಮದ ಪಾಟೀಲ / ಗೌಡ ಮನೆತನದವರು.

ಶ್ರೀ ವಾದಿರಾಜ ಯತಿಗಳ ಆತ್ಯಂತಿಕ ಭಕ್ತರು. ನೂರಾರು ಕೀರ್ತನೆಗಳನ್ನು ರಚಿಸಿದ್ದರೂ ಅಜ್ಞಾತರಾಗಿಯೆ ಉಳಿದಿದ್ದಾರೆ. ಅವರ ಕಳಸದ ಮನೆಯಲ್ಲಿರುವ ಹಸ್ತಪತಿಯಿಂದ ಇಲ್ಲಿಯ ಹಾಡನ್ನು ಎತ್ತಿಕೊಂಡಿದೆ.

**ನರಸಿಂಹವಿಠಲ**ರ ಕೃತಿಗಳೂ ಇದುವರೆಗೆ ಅಪ್ರಕಟಿತ. ಅವರು ಧಾರವಾಡ ಜಿಲ್ಲೆಯ ಕುಂಚೂರ ಗ್ರಾಮದವರು. ಶಿಕ್ಷಕ ವೃತ್ತಿಯಲ್ಲಿದ್ದರೆಂಬ ಅಂಶವೊಂದನ್ನು ಬಿಟ್ಟರೆ ಇನ್ನಾವ ವಿಚಾರವೂ ಅವರ ಬಗ್ಗೆ ತಿಳಿದು ಬಂದಿಲ್ಲ. ಸುಮಾರು ೧೩೦ ಹಾಡುಗಳನ್ನು ರಚಿಸಿದ್ದು ಅವರ ಮೊಮ್ಮಗನ ಬಳಿ ಇದ್ದ ಹಸ್ತಪ್ರತಿಯಿಂದ ಇಲ್ಲಿಯ ಮೂರು ಹಾಡುಗಳನ್ನು ತೆಗೆದುಕೊಂಡಿದೆ. 'ಬೋಧರ ನೋಡಿರೈ' ಎಂದು ಮೊದಲಾಗುವ ಹಾಡಿನಲ್ಲಿ ಶ್ರೀಸತ್ಯಬೋಧರನ್ನು ನಾನಾ ಬಗೆಯ ವಿಶೇಷಣಗಳಿಂದ ಸ್ತುತಿಸಿದ್ದಾರೆ. ಕ್ರ. ೧೬ರ ಕೃತಿಯಲ್ಲಿ ರಾಮದೇವರ ಪೂಜೆಯ ಬಗೆಯನ್ನು ವರ್ಣಿಸಿದ್ದಾರೆ. ಶ್ರೀಗಳು ನಿತ್ಯಸ್ನಾನ ಮಾಡುತ್ತಿದ್ದ ಬಾವಿಯ ಜಾಗ ಘಟಿಕಾರ ಎನ್ನುವವರ ಮನೆತನಕ್ಕೆ ಸೇರಿದ್ದು, ನರಸಿಂಹವಿಠಲರು ಅದನ್ನು ಸ್ಥಿರೀಕರಿಸಿದ್ದಾರೆ.

**ಭೀಮೇಶಕೃಷ್ಣ** ಮುದ್ರಿಕೆಯ ಹರಪನಹಳ್ಳಿ ಭೀಮವ್ವನ ಹೆಸರು ಸುಪರಿಚಿತವಾದದ್ದು. ಹಲವಾರು ಕ್ಷೇತ್ರಗಳನ್ನು ಸಂದರ್ಶಿಸಿ ಆ ಆ ಕ್ಷೇತ್ರದ ದೈವತ ಇಲ್ಲವೆ ಯತಿಗಳನ್ನು ಸ್ತುತಿಸಿದ್ದಾರೆ. ಆ ಮುಂದೆ ಬರುವ 'ಉದಯರಾಗ'ವನ್ನು ಅದಾರು ರಚಿಸಿದ್ದಾರೆಂಬುದು ಸ್ಪಷ್ಟವಿಲ್ಲ. (ಕ್ರ. ೧೮) ಕೊನೆಯಲ್ಲಿ 'ಶ್ರೀರಂಗನಾಥ' ಎಂಬ ಪದವೇನೊ ಇದೆ. ಇದರ ಮೂರನೆಯ ನುಡಿಯಲ್ಲಿ 'ಮೂಲರಾಮನನ್ನು ನೋಡಲು ದೇವತೆಗಳು ಬಂದಿದ್ದಾರೆ. ಆದ್ದರಿಂದ ಏಳಯ್ಯ ಗುರುವರೇಣ್ಯ' ಎಂಬ ಕಲ್ಪನೆ ಚೆನ್ನಾಗಿದೆ.

**ರಮಾಪತಿವಿಠಲ**ರು ಕರ್ಜಗಿಯ ಸುಪ್ರಸಿದ್ಧ ದಾಸರಾದ ಶ್ರೀದವಿಠಲರ ತಂಗಿಯ ಮಗ. ನರೇಗಲ್ಲ ರಾಮಣ್ಣ ಎನ್ನುವುದು

ಅವರ ಪೂರ್ವದ ಹೆಸರು. ಸರಕಾರೀ ನೌಕರಿಯಲ್ಲಿದ್ದರು. ಆದರೆ ಒಲವೆಲ್ಲ ದಾಸ ಸಾಹಿತ್ಯದ ಕಡೆಗೆ. ಕರ್ಜಗಿಯ ಇನ್ನೊಬ್ಬ ದಾಸರಾದ ತೀರ್ಥಪಾದವಿಠಲರಿಂದ ದಾಸದೀಕ್ಷೆ ವಹಿಸಿದರು. ಇಲ್ಲಿ ಬಂದ ಅವರ ಹಾಡಿನಲ್ಲಿ (ಕ. ೨೦), ಶ್ರೀ ಸತ್ಯಬೋಧರ ಜನನ, ಬಾಲ್ಯ ಮುಂತಾಗಿ ಹೇಳಿ ಅವರು ರಾತ್ರಿಯ ವೇಳೆ ಶಶಿಯನ್ನು ಸೂರ್ಯನನ್ನಾಗಿ ಮಾಡಿ ತೋರಿಸಿದವರೆಂದು ಅಲಂಕಾರಿಕವಾಗಿ ವರ್ಣಿಸಿದ್ದಾರೆ.

'ವೃಂದಾವನ ನೋಡಿರೊ' ಎಂಬ ಹಾಡಿನ ಅಂಕಿತ **ವಾಸ್ಯವಿಠಲ** ಎಂದಿದ್ದರೂ ಅವರು ಪೂರ್ವೋಕ್ತ ಕಲ್ಲೂರ ಸುಬ್ಬಣ್ಣದಾಸರೇನಲ್ಲ. ಏಕೆಂದರೆ ಈ ದಾಸರು ಶ್ರೀಸತ್ಯಬೋಧರ ಅನಂತರ ಪೀಠಸ್ಥರಾಗಿದ್ದ ಯತಿಗಳ ವೃಂದಾವನದ ಪ್ರಸ್ತಾಪ ಮಾಡಿದ್ದಾರೆ.

**ಸಿರಿವಿಠಲ** ಅಂಕಿತದ ಕಲಮದಾನಿ ನಾರಾಯಣರಾಯರು ೨೦ನೆಯ ಶತಮಾನದಲ್ಲಿದ್ದವರು. ದಾಸಸಾಹಿತ್ಯದ ಪುನರುಜ್ಜೀವನ ಕಾರ್ಯದಲ್ಲಿ ವಿಶೇಷವಾಗಿ ಶ್ರಮಿಸಿದವರು. ಅವರು ಚದರಿ ಹೋಗಿದ್ದ ದಾಸರ ಹಾಡುಗಳನ್ನು ಸಂಗ್ರಹಿಸಿದರು. ದಾಸಪೀಳಿಗೆಯನ್ನು ರೂಪಿಸಿದರು. ಹಿಂದಿನ ಹರಿದಾಸರ ಜೀವನ ವಿವರಗಳನ್ನು ಕಲೆಹಾಕಿದರು. ( ಅವರ ಮಗ ಗುರುರಾಯರು 'ಹರಿದಾಸರ ಕಥೆಗಳು' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ. ). Mystic Teachings of Haridasas of Karnataka ಎಂಬ ಗ್ರಂಥರಚನೆಯಲ್ಲಿ ಜೊತೆಗೂಡಿದ್ದರು. ಇದೆಲ್ಲಕ್ಕೆ ಮಿಗಿಲಾಗಿ ಸ್ವಯಂ ಕೀರ್ತನೆಗಳನ್ನು ರಚಿಸಿದ್ದಾರೆ. ಇಲ್ಲಿ ಬಂದಿರುವ ನಾಲ್ಕು ಹಾಡುಗಳು ಗುರುಗಳ ಬಗ್ಗೆ ಅವರಿಗಿದ್ದ ಭಕ್ತಿಭಾವವನ್ನು ಸುವ್ಯಕ್ತಗೊಳಿಸುವಂತಿದೆ. ವಿಶೇಷತಃ ೨೩ನೆಯ ಕ್ರಮಾಂಕದ ಹಾಡಿನಲ್ಲಿ ಗುರುಮಹಿಮೆಯನ್ನು ವಿನೂತನ ರೀತಿಯಲ್ಲಿ ಹೇಳಿದ್ದಾರೆ. ಅದನ್ನು ಶ್ರೀಸತ್ಯಬೋಧರಿಗೆ ಅನ್ವಯಿಸಿಯೆ ನೋಡತಕ್ಕುದು:

'ಗುರುವೊಲಿಯೆ ಹರಿಯೊಲಿವ' ಎಂದು ಮೊದಲಿಗೆ ಹೇಳಿ 'ಒಂದು ವೇಳೆ ಗುರುವು ನಮ್ಮನ್ನು ರಕ್ಷಿಸುತ್ತ ಇದ್ದರೆ ಹರಿಯು ನಮ್ಮ ಕಡೆ ಗಮನ ಕೊಡುವ ಆಗತ್ಯವಿಲ್ಲ, ಇಹದಲ್ಲಿ ಈ ರೀತಿ ಗುರುವಿನ ದಯವಿದ್ದರೆ ಪರದಲ್ಲಿ ನಾವು ಹರಿಕೃಪೆಯನ್ನು ಸುಲಭವಾಗಿ ನಿರೀಕ್ಷಿಸಬಹುದು. ಒಂದು ವೇಳೆ ಗುರು ನಮ್ಮ ಮೇಲೆ ರುಷ್ಟನಾದರೆ? ಆಗ ಹರಿ ನಮ್ಮ ಕಡೆಗೆ ಕಣ್ಣೆತ್ತಿಯೂ ನೋಡನು. ಇನ್ನು ಹರಿಯೇ ರುಷ್ಟನಾದರೆ? ಯೋಚನೆ ಬೇಡ; ಆಗ ಗುರುಕರುಣೆ ನಮ್ಮನ್ನು ರಕ್ಷಿಸಬಲ್ಲುದು!' ನಿಜಕ್ಕೂ ಹೃದ್ಯವಾದ ಚತುರೋಕ್ತಿ ಇಲ್ಲಿದೆ.

ಮುಂದಿನ ಕೀರ್ತನೆಯಲ್ಲಿ ಅವರು ಶ್ರೀ ಸತ್ಯಬೋಧರ ನಾಲ್ವತ್ತು ವರ್ಷದ ಪೀಠಾರೋಹಣವನ್ನಂತೂ ಪ್ರಸ್ತಾಪಿಸಿದ್ದಾರೆ. ಅನಂತರ ಶತಷಷ್ಟ್ಯಾಬ್ಧಿ - ಎಂದರೆ ೧೬೦ ವರ್ಷ ಕಾಲ ವೃಂದಾವನದಲ್ಲಿ ಸ್ಥಿರವಾಗಿ ಉಳಿದು ಆರಾಧನೆಗೊಳ್ಳುತ್ತಿದ್ದರಾಗಿ ಕಾಣಿಸಿದ್ದಾರೆ. ವೃಂದಾವನಸ್ಥರಾದ ವರ್ಷ ೧೭೮೩ಕ್ಕೆ ಈ ೧೫೦ ವರ್ಷ ಸೇರಿಸಿದರೆ ೧೯೪೩ ನೆಯ ಇಸವಿಯು ನಿಷ್ಪನ್ನವಾಗುತ್ತದೆ. ಹೀಗೆ ದಾಸರ ಅರಿವಿಲ್ಲದಂತೆಯೇ ತಮ್ಮ ಈ ಕೃತಿರಚನೆಯ ವರ್ಷವನ್ನು ಹೇಳಿದಂತಾಯಿತು!

ಇದೇ ದಾಸರ ೨೪(ಅ) ಕ್ರಮಾಂಕದ ಹಾಡಿನಲ್ಲಿ ವಿಷ್ಣುತೀರ್ಥ ಎಂಬವರ ಹೆಸರಿದೆ. ಅವರು ವಾನಪ್ರಸ್ಥರಾಗಿ ಹನ್ನೆರಡು ವರ್ಷ ಕಾಲ ಅಡವಿಯ ಏಕಾಂತ ಬಯಸಿ ಇದ್ದರಾದ್ದರಿಂದ ಅವರು ಅಡವಿ ವಿಷ್ಣುತೀರ್ಥ ಎಂದೇ ಹೆಸರಾಗಿದ್ದಾರೆ. ಮುನವಳ್ಳಿ ಎಂಬಲ್ಲಿ ಹನ್ನೆರಡು ಸಲ ಸುಧಾಪ್ರವಚನ ಮಂಗಳ ಮಾಡಿದ ಮಹನೀಯರಿವರು. ಇವರಿಗೆ ಸನ್ಯಾಸಾಶ್ರಮ ಕೊಟ್ಟವರು ಶ್ರೀ ಸತ್ಯವರರು. (೧೭೯೪-೯೭) ಆ ಮುಂಚೆ ಶ್ರೀ ಸತ್ಯಬೋಧರನ್ನು ಕಂಡಿದ್ದರು.

**ಹನುಮನಯ್ಯ** ಎಂಬ ಮುದ್ರಿಕೆ ಯಾರದು ? ಈ ಹನುಮ

ಕದರ ಮಂಡಲಗಿ ಹನುಮಂತ ದೇವರು ಎಂದೆನಿಸುವುದು. ಅಲ್ಲಿ ಇದ್ದ ಭೀಮಾಚಾರ್ಯರೆಂಬವರು ಶ್ರೀಸತ್ಯಬೋಧರಲ್ಲಿ ಅಪಾರ ಭಕ್ತಿಯುಳ್ಳವರಾಗಿದ್ದರು. ಆದರೆ ಹಾಡುಗಳನ್ನು ರಚಿಸಿದ್ದಾರೆ - 'ಕದರುಂಡಲಗಿ ಹನುಮಯ್ಯ' ಎಂಬ ನಿಶ್ಚಿತವಾದ ಮುದ್ರಿಕೆಯಿಂದ. ಅಂತೂ ಈ ಹನುಮನಯ್ಯ ಎಂಬುದರ ಬಗ್ಗೆ ವಿವರಗಳಿಲ್ಲ. ಆದರೆ ಬಂದಿದ್ದ ಇಲ್ಲಿಯ ಹಾಡುಗಳು ಚೆನ್ನಾಗಿವೆ.

ಈ ನಿಮಿತ್ತದಿಂದ ಭೀಮಾಚಾರ್ಯರ ಬಗ್ಗೆ ಇನ್ನಷ್ಟು ವಿವರಗಳನ್ನು ಕೊಡಬೇಕೆನಿಸುವುದು. ಅವರನ್ನು ಹಿರೇ ಆಚಾರ್ಯರೆಂದು ಕರೆಯುತ್ತಿದ್ದರು. ಕದರಮಂಡಲಗಿಯ ಹನುಮಪ್ಪನ ಸೇವೆಯಲ್ಲಿ ಸದಾ ನಿರತರಾಗಿದ್ದ ಅವರಿಗೆ. ಎಲ್ಲೆಲ್ಲಿಂದಲೂ ಜಮೀನಿನ ದತ್ತಿಗಳು ಬಂದಿದ್ದವು. ಸವಣೂರಿಗೆ ಕದರಮಂಡಲಗಿಯೂ ಹತ್ತಿರದ ಊರೇ. ಶ್ರೀಗಳವರ ದರ್ಶನಕ್ಕೆ ಹೋಗುತ್ತಿದ್ದರು. ಆಚಾರ್ಯರ ಧರ್ಮನಿಷ್ಠೆ, ಹರಿದಾಸ ಪ್ರವೃತ್ತಿ ಅವರಿಗೆ ತುಂಬಾ ಮೆಚ್ಚಿಗೆಯಾಗಿತ್ತು. ಶ್ರೀರಾಮದೇವರ ಕಾಲಕ್ಕೆ ಹತ್ತಿರವೇ ಕೂರಿಸಿಕೊಂಡು ತೀರ್ಥಪ್ರಸಾದ ಕೊಡುವಷ್ಟು ಆಚಾರ್ಯರಿಗೆ ಪ್ರಾಶಸ್ತ್ಯವೀಯುತ್ತಿದ್ದರೆಂದು ಪ್ರತೀತಿ. ಮಠದಲ್ಲಿಯೇ ಇದ್ದವರಿಗೆ ಆ ಕಾರಣದಿಂದ ಅಸೂಯೆ. ಒಮ್ಮೆ ಶ್ರೀಗಳು ಪೂಜೆ ಮುಗೀತಾ ಬಂದ ಕಾಲದಲ್ಲಿ ತಮ್ಮ ಮುಷ್ಟಿಯಲ್ಲಿ ಒಂದು ವಸ್ತುವನ್ನು ಮುಚ್ಚಿ 'ಇದರಲ್ಲೇನಿದೆ, ಹೇಳಿ ನೋಡುವಾ' ಎಂದು ನೆರೆದವರಿಗೆ ಕೇಳಿದರಂತೆ. ಆಗ ಭೀಮಾಚಾರ್ಯರು, ನರಸಿಂಹಮುದ್ರಾಂಕಿತ ಸಾಲಿಗ್ರಾಮವೆಂದು ಗುರುತಿಸಿದಾಗ, ಶ್ರೀಗಳು ಮುಷ್ಟಿಯನ್ನು ಬಿಚ್ಚಿ ಅಂಗೈಯಲ್ಲಿ ಹಿಡಿದರು. ಭೀಮಾಚಾರ್ಯರು ಭಾವಪರವಶರಾಗಿ ಬಾಯಿ ತೆರೆದಂತೆ ಕಾಣುವ ನರಸಿಂಹದೇವರನ್ನು ಕಲ್ಪಿಸಿ ಈ ಹಾಡನ್ನು ರಚಿಸಿ ಹೇಳಿದರು :

ಬಾಯಿ ತೆರೆದ ಬಗೆಯೇನೊ ದೇವರ ದೇವ
ತೋಯದಳ ನೇತ್ರನೇ ನೀಯೆನಗಿದು ಪೇಳೊ ॥ ಪ ॥

ಅಸುರನ ಉದರವ ಹಸನಾಗಿ ಬಗೆವಾಗ
ಹಸಿದು ಬಾಯಿ ತೆರೆದೆಯಾ
ಬಿಸಜಾಕ್ಷ ಭೂಮಂಡಲವು ಬಿಸರೊಳಿದ್ದ
ಉಬ್ಬಸ್ಸಿಗೆ ಬಾಯಿ ತೆರೆದೆಯಾ || ೧ ||

ಮಡದಿಯ ರೂಪಕ್ಕೆ ಮರುಳಾಗಿ
ಆದರಿಂದ ಬಿಡದೇ ಬಾಯ ತೆರೆದೆಯಾ
ದೃಢವಾದ ಪ್ರಹ್ಲಾದನ ಒಡೆಯಾ ರಕ್ಷಿಸು ಎಂಬೊ
ನುಡಿಗೆ ಬಾಯಿ ತೆರೆದೆಯಾ || ೨ ||

ಗುರು ಸತ್ಯಬೋಧರಾಯರ ನಿತ್ಯ ಭಜನೆಗೆ
ಬೆರೆತು ಬಾಯ ತೆರೆದೆಯಾ
ವರಕದರುಂಡಲಗಿ **ಹನುಮಯ್ಯ**ನೊಡೆಯನೇ
ಕರವ ಮುಗಿವೆ ಬಾಯ ಮುಚ್ಚು ಕರುಣಿಸಿ || ೩ ||

**ಹನುಮೇಶವಿಟ್ಠಲ**ರ ಬಗ್ಗೆ ಒಂದಿಷ್ಟು ಮಾಹಿತಿ ಲಭ್ಯವಿದೆ. ಅವರು ಮೂಲತಃ ಹಾವನೂರಿನ ಬುರ್ಲಿ ಮನೆತನದ ವೆಂಕಟೇಶ ನಾಯಕರು. ಹತ್ತಿರದ ಗುತ್ತಲದಲ್ಲಿ ರಾಘವೇಂದ್ರಸ್ವಾಮಿಗಳ ವೃಂದಾವನ ಸ್ಥಾಪಿಸಿದ್ದಾರೆ. ಕೋರ್ಟಿನಲ್ಲಿ ಕಾರಕೂನರಾಗಿ ವೃತ್ತಿಜೀವನ ನಡೆಸಿದ್ದರೂ ಹರಿದಾಸ ಪ್ರವೃತ್ತಿಯನ್ನು ಮೈಗೂಡಿಸಿಕೊಂಡು ಬೇರೆ ಊರುಗಳಲ್ಲಿ ಹಾಡುತ್ತಿದ್ದರು. ಅವರು ರಚಿಸಿದ ಕೃತಿಗಳು ಮುದ್ರಣಗೊಂಡಿವೆ. ಕೆಲವು ಶ್ರೀ ಸತ್ಯಬೋಧರನ್ನು ಕುರಿತೇ ಇವೆ. ಒಂದರಲ್ಲಿ ಅವರು, ಸ್ವಾಮಿಗಳು ೧೯ ವರ್ಷ ಸಂಚಾರದಲ್ಲಿ ಕಳೆದರೆಂದೂ ಅನಂತರದ ೨೧ ವರ್ಷಗಳನ್ನು ಸವಣೂರಲ್ಲಿಯೆ ಹೆಚ್ಚಾಗಿ ಕಳೆದರೆಂದೂ ಕಾಣಿಸಿದ್ದಾರೆ. (ಕೃ. ೩೧). ಒಂದು ಮಂಗವು ಸ್ವಾಮಿಗಳ ಹತ್ತಿರ ಬಂದು ಕೂಡುತ್ತಿತ್ತಷ್ಟೆ. ಅದರ ಪೂರ್ವಜನ್ಮದ ಹೆಸರು 'ಸೊನ್ನೆ ರಾಮಾಚಾರ್ಯ' ಎಂಬುದಾಗಿ ಹನುವೇಶವಿಠಲರು ಹೇಳುತ್ತಾರೆ. (ಬೇರೆಡೆ ಕೋನೇರಿಯಾಚಾರ್ಯ ಎಂದು ಬಂದಿದೆ.)

ಪೀಠಾರೋಹಣ ಮಾಡಿದರು; ವರ್ಷ ೧೭೪೪. ತಮ್ಮ ಗುರುಗಳ ವೃಂದಾವನವನ್ನು ಮಾನಾಮದುರೈ ಎಂಬಲ್ಲಿ ನಿರ್ಮಿಸಿ ರಾಮೇಶ್ವರದತ್ತ ಸಂಚಾರಕ್ಕೆ ಹೊರಟರು. ತಮಿಳುನಾಡಿನ ಆ ದಕ್ಷಿಣ ಪ್ರದೇಶದಲ್ಲಿ ನವಾಬರುಗಳು, ಮರಾಠರು, ಮಾಂಡಲಿಕರು ಮುಂತಾದವರಲ್ಲಿ ಕಾಲಕಾಲಕ್ಕೆ ಸಂಘರ್ಷಗಳು ನಡೆದೇ ಇದ್ದುವು. ಶ್ರೀಗಳು ರಾಮೇಶ್ವರದಿಂದ ಹಿಂತಿರುಗಬೇಕೆನ್ನುವಾಗ ಅಲ್ಲಿಯ ಮಾಂಡಲಿಕ ಅವರನ್ನು ತಡೆದನು. ಇತ್ತ ಆ ಮುಂಚೆ ನಿಜಾಮನ ವಶದಲ್ಲಿದ್ದ ತ್ರಿಚನಾಪಳ್ಳಿಯನ್ನು ಮುರಾರಿರಾವ್ ಘೋರ್ಪಡೆ ಹಿಡಿದುಕೊಂಡಿದ್ದನು. ಅಲ್ಲಿಂದ ಅವನನ್ನು ಉಚ್ಚಾಟಿಸಲು ಶ್ರೀಗಳ ಮಧ್ಯಸ್ಥಿಕೆಯನ್ನು ಕೋರಲಾಯಿತು. ಇದಕ್ಕಾಗಿ ಓಡಾಡಿದವ ಶ್ರೀಮಠದ ಭಕ್ತನಾದ ಜಾನೋಜಿ ನಿಂಬಾಳಕರ ಎಂಬಾತ. ಮುರಾರಿಯೇನೊ ತ್ರಿಚನಾಪಳ್ಳಿಯನ್ನು ತೆರವು ಮಾಡಿದ. ಶ್ರೀಗಳವರ ಮೇಲಿನ ಬಂಧನವೂ ದೂರವಾಯಿತು. ತ್ರಿಚನಾಪಳ್ಳಿಗೆ ಜಾನೋಜಿಯ ವಿನಂತಿಯ ಮೇರೆಗೆ ಬಂದದ್ದಾಯಿತು. ಆದರೆ ಅದೇ ನಿಜಾಮನ ಸೈನಿಕರು ಶ್ರೀಮಠದಲ್ಲಿ ತುಂಬಾ ಸಂಪತ್ತಿರಬೇಕೆಂದು ದೋಚತೊಡಗಿದರು! ಇದನ್ನು ಅರಿತ ಶ್ರೀಗಳವರು ರಾಮದೇವರ, ಮತ್ತಿತರ ಪೂಜಾದೈವತಗಳನ್ನು ಬೇರೆಡೆ ಕಳಿಸಿದ್ದರು. ಅದರಿಂದ ರಾಮದೇವರಿಗೆ ಪೂಜೆ ಇಲ್ಲದಾಯಿತು. ಒಂದಲ್ಲ, ಒಂಬತ್ತು ದಿನ! ಶ್ರೀ ಸತ್ಯಬೋಧರರದು ಅಖಂಡ ಉಪವಾಸ. ನ್ಯಾಯಕ್ಕಾಗಿ ಆಗ್ರಹ, ಉಪವಾಸ ಇತ್ಯಾದಿ ಮಾತುಗಳನ್ನು ಗಾಂಧೀಜಿ ನಿಮಿತ್ತವಾಗಿ ತಿಳಿದಿದ್ದೇವೆ. ಅನ್ಯಾಯದ ರೀತಿಯ ನಡಾವಳಿಯನ್ನು ಪ್ರತಿಭಟಿಸಿ ಶ್ರೀಗಳು ಮಾಡಿದ ಉಪವಾಸ ಈ ಬಗೆಯಲ್ಲಿ ಮೊದಲಿನದು ಎನ್ನಬಹುದೇ ?

ಇತ್ತ ಸೈನ್ಯದಲ್ಲಿ ಏನೊ ಒಂದು ವಿಶಿಷ್ಟ ರೋಗ ಹಬ್ಬಿದ್ದಿತು. ಅಲ್ಲಿಯ ಮುಖಂಡ ಪಶ್ಚಾತ್ತಾಪಬಟ್ಟು ಸತ್ಯಬೋಧರಲ್ಲಿ ಬಂದು ಉಪವಾಸ ನಿಲಿಸಲು ಕೇಳಿಕೊಂಡ. (ಉಪೋಷಣೆಗಾಗಿ ಮಾವಿನ ಹಣ್ಣುಗಳನ್ನು ತಂದುಕೊಟ್ಟನಂತೆ.) ಆ ಮುಂದೆ ಮೂಲರಾಮದೇವರೂ ಬಂದರು. ಸೈನ್ಯದ ಛಾವಣಿಯಲ್ಲೇ ಪೂಜಾಸಂಭ್ರಮ ನೆರವೇರಿತು.

ಅಲ್ಲಿಂದ (೧೭೪೫-) ಶ್ರೀಗಳವರು ನಿರಾಂತಕವಾಗಿ ದಕ್ಷಿಣ ಭಾರತದ ಹಲವಾರು ಊರುಗಳಲ್ಲಿ ಸಂಚರಿಸಿದರು. ತಂಜಾವೂರು, ಕುಂಭಕೋಣಂ, ಚಿದಂಬರಂ, ಶ್ರೀಮುಷ್ಣ, ವೃದ್ಧಾಚಲ, ಪಾಂಡಿಚೇರಿ, ಜಿಂಜಿ, ಆರಣಿ (ಸತ್ಯವಿಜಯರ ವೃಂದಾವನ ಸ್ಥಳ), ಅರ್ಕಾಟ, ತಿರುವಂತನಪುರ, ಏನೆಲ್ಲ. ಹೋದಲ್ಲೆಲ್ಲ ಸ್ವಧರ್ಮಪ್ರಸಾರ ಮಾಡಿದರು. ಹೇರಳ ಕಾಣಿಕೆಗಳನ್ನು ಪಡೆದರು. ಮಠದ ಭೌತಿಕ ಸಿರಿವಂತಿಕೆಯನ್ನು ಹೆಚ್ಚಿಸಿದರು. ಜೊತೆಗೆ ಪಾಂಡಿತ್ಯದ್ದೂ.

ಮರಳಿ ತಂಜಾವೂರಿಗೆ ಬಂದಾಗ, ಅಲ್ಲಿಯ ರಾಜಗುರು ಸೇತುಗೋಸ್ವಾಮಿ ಎಂಬವನು ಕಿರುಕುಳ ಕೊಡತೊಡಗಿದ. ತನ್ನ ಅದ್ವೈತ ಪಂಡಿತರನ್ನು ಕರೆತಂದ. ಅವರೆಲ್ಲ ಶ್ರೀಗಳವರೊಡನೆ ವಾದಹಾಕಿ ಸೋತರು. ಮೊದಲಿಗೆ ಈ ಸೇತುಭಾವನ ಚಾಡಿಯ ಮಾತನ್ನು ಕೇಳಿ ಅಲ್ಲಿಯ ರಾಜನು ಶ್ರೀಗಳಿಗೆ ತೊಂದರೆ ಕೊಡಲೆಂದ. ಆದರೆ ತನ್ನ ತಪ್ಪು ತಿಳಿದು ಕ್ಷಮೆ ಕೇಳಿದನಲ್ಲದೆ ಸೇತುಗೋಸ್ವಾಮಿಗೂ ಹಾಗೆ ಮಾಡ ಹೇಳಿದ. ಆದರೂ ಅವನ ಹೊಟ್ಟೆಕಿಚ್ಚು ಹೋಗಿರಲಿಲ್ಲ. ಕೊನೆಗೆ ಅವನನ್ನು ರಾಜಗುರು ಪದವಿಯಿಂದ ತೆಗೆದು ಹಾಕಲಾಯಿತು.

ಆ ಮುಂದೆ ಶ್ರೀಗಳು ತಿರುಪತಿಗೆ ಹೋಗಿ ತಿಮ್ಮಪ್ಪನ ದರ್ಶನ ಪಡೆದರು. ಮುಂದಿನ ಸಂಚಾರದಲ್ಲಿ ಕಡಪಾ, ಗದ್ವಾಲ್ ದಾಟಿ ಹೈದರಾಬಾದಿಗೆ ಬಂದರು. ಎಲ್ಲೆಲ್ಲಿಯೂ ಮಾಧ್ವ ಶಿಷ್ಯರ ಸಂಭ್ರಮ ಮೇರೆವರಿದು ಹರಿಯಿತು.

ಹೈದರಾಬಾದಿನಿಂದ ಶ್ರೀಗಳು ಪಶ್ಚಿಮಕ್ಕೆ, ಈಗಿನ ಮಹಾರಾಷ್ಟ್ರದ ಗಡಿಯಲ್ಲಿ ಪ್ರವೇಶಿಸಿದರು. ಸೊನ್ನಿ, ಗುರುಮಟಕಲ್ಲು ಇತ್ಯಾದಿ. ಈ ಪರಿಸರದಲ್ಲಿಯೇ ಸುಪ್ರಸಿದ್ಧ ನಾನಾಸಾಹೇಬ ಪೇಶ್ವೆಯನ್ನು ಭೆಟ್ಟಿಯಾದದ್ದು. ತನ್ನ ಸೈನ್ಯದ ಠಾಣೆಯಲ್ಲಿಯೆ ಪೂಜೆ, ಸತ್ಕಾರಾದಿ ಜರುಗಿಸಿದನು. ಈ ಸುದೀರ್ಘ ಸಂಚಾರಕ್ಕೇನ ಏಳೆಂಟು ವರ್ಷಗಳೇ ಸಂದಿದ್ದವು. ಶ್ರೀ ಸತ್ಯಬೋಧರ ಪಾಂಡಿತ್ಯ, ವೈರಾಗ್ಯ, ಸಮಚಿತ್ತ

ಮತ್ತು ಸಹನೆ, ಜೊತೆಗೆ ಜನಾನುರಾಗ ಈ ಗುಣಗಳು ಎಲ್ಲೆಲ್ಲಿಯೂ ಹೆಸರು ಮಾಡಿದವು.

ಅಲ್ಲಿಂದ ಶ್ರೀಗಳು ತಮ್ಮ ಹುಟ್ಟೂರಾದ ರಾಯಚೂರಿಗೆ ಬಂದರು. ಮುಂದಿನ ವಾಸ್ತವ್ಯ ಪಾವಟೂರು ಎಂಬಲ್ಲಿ, ಅದೇನು ನಿಮಿತ್ತವೊ ಐದಾರು ವರ್ಷ ಕಳೆದರೆಂದು ಹೇಳಲಾಗಿದೆ. ಅಲಂಪುರ ಎನ್ನುವುದು ಅವರು ಸಂದರ್ಶಿಸಿದ ಇನ್ನೊಂದು ಸ್ಥಳ. ಮರಳಿ ಹೈದ್ರಾಬಾದಿಗೆ ಬಂದರು. ಇಲ್ಲಿ ಇದ್ದಾಗಲೇ ರಾಮದೇವರಿಗೆಂದು ಒಂದು ಸುಂದರ ಬೆಳ್ಳಿಯ ಮಂಟಪವನ್ನು ಮಾಡಿಸಿದರು.

ಅನಂತರದ ಅವರ ಸಂದರ್ಶನ ಸ್ಥಳಗಳೆಂದು ಸುರಪುರ, ಗಜೇಂದ್ರಗಡ, ಕನಕಗಿರಿ, ರಾಯದುರ್ಗ, ಗುತ್ತಿ ಇವನ್ನು ಹೆಸರಿಸಬೇಕು. ಗುತ್ತಿಯಲ್ಲಿಯೇ ಪೂರ್ವೋಕ್ತ ಮುರಾರಿರಾವ ಘೋರ್ಪಡೆ ಇರುತ್ತಿದ್ದದ್ದು, ಶ್ರೀಗಳವರನ್ನು ವಿಶೇಷವಾಗಿ ಸನ್ಮಾನಿಸಿದನು. ತಿಳಿಯಬೇಕಾದ ಮಾತೆಂದರೆ ಶ್ರೀಗಳು ಸಂಚಾರ ಹೋದಲ್ಲೆಲ್ಲ ಮಾಧ್ವರು ಮಾತ್ರವಲ್ಲ, ಅನ್ಯಜಾತಿ-ಪಂಥಗಳವರೂ, ನವಾಬರುಗಳೂ ಅವರಿಗೆ ವಿಶೇಷ ಮರ್ಯಾದೆ ಸಲ್ಲಿಸುತ್ತಿದ್ದರು. ಅಂಥ ಮಹಾನ್ ವ್ಯಕ್ತಿತ್ವ ಅವರದಾಗಿತ್ತು. ಮತ್ತೆ ೮-೧೦ ವರ್ಷಗಳು ಸಂದಿರಬೇಕು. ಸಂಚಾರತ್ವೇನ ಹರಿಹರಕ್ಕೆ ಬಂದರು. (ವರ್ಷ ೧೭೬೭.)

ಅಲ್ಲಿಗೆ ಖಂಡೇರಾಯ ಬಂದು ತಮ್ಮ ಸವಣೂರಿಗೆ ಬರಬೇಕೆಂದು ವಿನಂತಿಸಿದನು. ಇದಕ್ಕೂ ಕೆಲ ವರ್ಷ ಮುಂಚೆ ಅವನ ಭೆಟ್ಟಿಯಾಗಿದ್ದಿತು ಈ ವೇಳೆಗೆ ಆತ ಸಾಮಾನ್ಯ ಅಧಿಕಾರದಿಂದ ಸವಣೂರಿನ ದಿವಾನ ಪದವಿಗೆ ಏರಿದ್ದ; ಶ್ರೀಗಳವರ ಶ್ರೀರಕ್ಷೆಯೇ ಕಾರಣವೆಂದು ಬಗೆದಿದ್ದ ಅಂತೂ ಅವನ ಕೋರಿಕೆಯನ್ನು ಮನ್ನಿಸಿ ಶ್ರೀಗಳವರು ಸವಣೂರಿಗೆ ಬಂದರು. ಅವರಿಗೆಂದು ಮಠವನ್ನು ಕಟ್ಟಿಸಿಕೊಟ್ಟ. ಸವಣೂರ ನವಾಬನಾದ ಹಕೀಮಖಾನನು ಅವರಿಗೆ ಏನೇನು ಸೌಲಭ್ಯ ಒದಗಿಸಿದ: ಅದಾವ ರೀತಿಯಲ್ಲಿ ತನ್ನ ಗೌರವ ಸಲ್ಲಿಸಿದನೆಂಬುದಕ್ಕೆ ಐತಿಹಾಸಿಕ

ಆಧಾರಗಳಿಲ್ಲ. ಇಷ್ಟು ಮಾತ್ರ ನಿಜ; ಶ್ರೀಗಳವರ ಯಾವುದೇ ಚಟುವಟಿಕೆಗೆ ಅಡೆತಡೆಯನ್ನು ತರಲೇ ಇಲ್ಲ. ಇದಕ್ಕೆ ಖಂಡೇರಾಯನೇ ನಿಮಿತ್ತನೆಂಬುದು ಸ್ಪಷ್ಟ.

ಉತ್ತರಾದಿಮಠದ ಪರಂಪರೆಯೇ ಎಂಬಂತೆ ಶ್ರೀಗಳವರು ಅನೇಕ ವರ್ಷ, ಸುಮಾರು ಎರಡು ದಶಕಗಳ ಕಾಲ, ಸಂಚಾರದಲ್ಲಿ ಇದ್ದರು, ಆ ಮುಂದೆ ಸವಣೂರಲ್ಲಿ ಬಹುಮಟ್ಟಿಗೆ ಸ್ಥಾಯಿಯಾಗಿ ನಿಂತರು. ಖಂಡೇರಾಯನು ಅವರ ವಿಶಾಲ ಪರಿವಾರಕ್ಕಾಗಿ ಮಠವನ್ನು ವಿಸ್ತರಿಸಿ ಕೊಟ್ಟ, ಕೆಲಕಾಲದ ಅನಂತರ ವಿಷ್ಣುತೀರ್ಥವೆಂಬ ಭಾವಿ ಸಿದ್ಧವಾಯಿತು ಅವರಿಗಾಗಿ.

ಗಮನಿಸಬೇಕಾದ ಒಂದು ಗಣನೀಯ ಸಂಗತಿಯೆಂದರೆ, ಶ್ರೀಗಳವರ ಈ ಸ್ಥಾಯಿತ್ವದಿಂದಾಗಿ ಅನೇಕ ಮಾಧ್ವ ವಿದ್ವನ್ಮಣಿಗಳು ಸವಣೂರಿಗೆ ಮೇಲಿಂದ ಮೇಲೆ ಬರುವಂತಾದದ್ದು. ಪಾಂಡುರಂಗಿ ಮನೆತನದ ನರಸಿಂಹಾಚಾರ್ಯ ಮತ್ತು ಅಣ್ಣಯ್ಯಾಚಾರ್ಯರು, ಗಾರ್ಲವಾಡ ಶ್ರೀನಿವಾಸಾಚಾರ್ಯರು, ಗಲಗಲಿ ಮುದ್ಗಲಾಚಾರ್ಯರು, ಉಮರ್ಜಿ ಕೃಷ್ಣಾಚಾರ್ಯರು, ಕೊರ್ಲಹಳ್ಳಿ ಮನೆತನಕ್ಕೆ ಸಂಬಂಧಿಸಿದ ರಘುನಾಥಾಚಾರ್ಯರು, ಕಂಚಿ ಶ್ರೀನಿವಾಸಾಚಾರ್ಯರು ಯಾದವಾರ್ಯರ ಪೀಳಿಗೆಯ ಸತ್ಯಾಚಾರ್ಯರು - ಈ ಒಬ್ಬೊಬ್ಬರೂ ಮಧ್ವಶಾಸ್ತ್ರದಲ್ಲಿ ದಿಗ್ಗಜರಾಗಿದ್ದರು. ಅವರೆಲ್ಲರನ್ನು ಆಕರ್ಷಿಸುವಂಥ ಅಗಮಾನ್ಯತೆ ನಮ್ಮ ಸತ್ಯಬೋಧರಿಗಿದ್ದಿತು. ಇವರುಗಳಿಗೆ, ಇನ್ನೂ ಅನೇಕಾನೇಕ ಸದ್ಬ್ರಾಹ್ಮಣರಿಗೆ ಹೇರಳ ಧನಕನ ಸಲ್ಲುತ್ತಿದ್ದಿತು. ಆದಾಗ್ಯೂ ಮಠದ ಸಿರಿವಂತಿಕೆ ಮುಪ್ಪಾಗದಂತೆ ವಿಜೃಂಭಿಸಿತು.

ಶ್ರೀಗಳವರು ಸವಣೂರಲ್ಲಿದ್ದಾಗ ಕೆಲವು ಅಲೌಕಿಕ ಘಟನೆಗಳು ಜರುಗಿದುವಾಗಿ ಪ್ರತೀತಿ ಇದೆ. ಸಂಕ್ಷೇಪವಾಗಿ ಇಲ್ಲಿ ಕಾಣಿಸುತ್ತೇವೆ.

೧. ಟೀಪೂ ಸುಲ್ತಾನನು ಸವಣೂರಿನ ಮೇಲೆ ದಂಡೆತ್ತಿ

ಬಂದಾಗ, ನವಾಬನಲ್ಲಿ ಅವನು ಕೇಳಿದ ಕಪ್ಪ ಕೊಡಲು ಹಣವಿರಲಿಲ್ಲ. ಶ್ರೀಗಳವರು ತಮ್ಮ ಭಂಡಾರದಿಂದ ನಾಣ್ಯಗಳನ್ನು ತೆಗೆದುಕೊಟ್ಟರು. ಅವರ ಖಾಸ ಮೊಹರನ್ನು ನೋಡಿದ ಟೀಪೂ, ಅದೆಲ್ಲವನ್ನೂ ನಮ್ರಭಾವದಿಂದ ನಿರಾಕರಿಸಿ ತನ್ನ ಕಾಣಿಕೆಯನ್ನು ಸೇರಿಸಿ ಹಿಂತಿರುಗಿಸಿದ. (ಟೀಪೂ ಅಧಿಕಾರ ವಹಿಸಿದ್ದು ೧೭೮೨ರಲ್ಲಿ. ಶ್ರೀಗಳವರು ವೃಂದಾವನಸ್ಥರಾದದ್ದು ೧೭೮೪ರ ಮಾರ್ಚಿ ತಿಂಗಳಲ್ಲಿ. ಈ ಅವಧಿಯಲ್ಲಿ ಟೀಪೂ ಸುಲ್ತಾನನು ಸವಣೂರಿಗೆ ಮುತ್ತಿಗೆ ಹಾಕಿರಲಿಲ್ಲ. ಆದ್ದರಿಂದ ಈತ ಹೈದರ ಅಲಿ ಇರಬೇಕು.)

೨. ಶ್ರೀ ಸತ್ಯಬೋಧರು ಟಂಕಸಾಲೆಯಲ್ಲಿ ತಮ್ಮದೇ ಆದ ನಾಣ್ಯಗಳನ್ನು ಟಂಕಿಸುತ್ತಿದ್ದರು. ಅವುಗಳಲ್ಲಿ ಕೆಲವು ಈಗಲೂ ಉಳಿದಿವೆ. ಪುರಾತತ್ವಶಾಸ್ತ್ರದ ತಜ್ಞರಾದ ರಾ.ನರಸಿಂಹಾಚಾರ್ಯರು ೧೯೧೩ರಲ್ಲಿ ಅವನ್ನು ಉಲ್ಲೇಖ ಮಾಡಿದ್ದಾರೆ. ಒಂದು ಬದಿಯಲ್ಲಿ 'ಶ್ರೀ ಸತ್ಯಬೋಧ ಗುರುರಾಜ' ಎಂದೂ ಇನ್ನೊಂದು ಬದಿಯಲ್ಲಿ 'ಗುರುರಾಜೋ ವಿಜಯತೇ' ಎಂದೂ ಕೆತ್ತಿಸಿದೆ. (ನಾಣ್ಯಗಳನ್ನು ಟಂಕಿಸಿದ್ದುದು ನಿಜವೇ. ಆದರೆ ಅವೇನೂ ಚಲಾವಣೆಯ ನಾಣ್ಯಗಳಾಗಿರದೇ ಶ್ರೀಗಳು ದಕ್ಷಿಣೆಯ ರೂಪದಲ್ಲಿ ಕೊಡುತ್ತಿದ್ದ ಕಾಣಿಕೆಗಳಾಗಿದ್ದಿರಬೇಕು.)

೩. ಶ್ರೀ ಸತ್ಯಬೋಧರ ಅಡಿಗೆಯಯುವ ಯಾರದೋ ದುರ್ಬೋಧದಿಂದ ವಿಷವನ್ನು ಹಾಕಿದ್ದ. ಅದನ್ನೆ ಶ್ರೀರಾಮದೇವರಿಗೆ ನೈವೇದ್ಯ ಮಾಡಲಾಗಿತ್ತು. ದೇವರಿಗೆ ಅರ್ಪಿತವಾದ ಮೇಲೆ ಯಾವ ಯೋಚನೆ ಮಾಡದೇ, ಹಾಕಿದ್ದು ವಿಷವೆಂದು ತಿಳಿದಿದ್ದರೂ ಶ್ರೀಗಳು ಅದನ್ನು ಸೇವಿಸಿದರು. ಮುಂದೆ ಉದರರೋಗ ಸಂಭವಿಸಲು ವೈದ್ಯರು, ಹಗಲು ಊಟ ಮಾಡದೇ ರಾತ್ರಿ ಮಾಡಬೇಕಾಗಿ ಸೂಚಿಸಿದರು. ಅಂದಾಗ ಶ್ರೀರಾಮದೇವರ ಪೂಜೆಯೂ ರಾತ್ರಿಯ ತನಕ ಮುಂದೂಡಬೇಕಾಯಿತು. ಆಮೇಲೆಯೇ ಆಹಾರ ಸ್ವೀಕಾರ. ಕುಹಕಿಗಳು ನಿಂದೆಯ ಮಾತನ್ನಾಡಿದರು. ಅವರಿಗೆ ಪ್ರತ್ಯುತ್ತರವಾಗಿ ಶ್ರೀಗಳವರು

ಮಧ್ಯರಾತ್ರಿಯಲ್ಲಿ ಸೂರ್ಯನು ಆಕಾಶದಲ್ಲಿ ಕಾಣುವ ಹಾಗೆ ಮಾಡಿದರು.

(ಈ ದರ್ಶನವು ಶ್ರೀಗಳವರ ಸಮೀಪಕಾಲೀನ ಸಂಸ್ಕೃತ ಕೃತಿಗಳಲ್ಲಿ ಬಂದಿಲ್ಲ. ಅವರ ಸಮಕಾಲೀನರಾಗಿದ್ದ ಜಗನ್ನಾಥದಾಸರ ಹಾಡುಗಳಲ್ಲಿಯೂ ಇಲ್ಲ. ಸತ್ಯಬೋಧರ ನಿರ್ವಾಣದ ಐವತ್ತು ವರ್ಷಗಳ ಅನಂತರ ಬಾಳಿದ್ದ ವೆಂಕಟವಿಠಲ ಎನ್ನುವವರ ಹಾಡಿನಲ್ಲಿ ಮೊದಲ ಬಾರಿ ಕಾಣಿಸಿಕೊಂಡಿದೆ. ಸುಮಾರು ಅದೇ ಕಾಲದಲ್ಲಿ ರಚಿತವಾದ ಸಂಸ್ಕೃತ ಸ್ತುತಿಯಲ್ಲಿಯೂ ಬಂದಿದೆ.)

೪. ಸವಣೂರಿನ ಓರ್ವ ಮುಸ್ಲಿಂ ಸರದಾರನು ದೊಡ್ಡ ಮನೆಯೊಂದನ್ನು ಕಟ್ಟಿಸಿದ್ದ. ಆದರೆ ಅಲ್ಲೊಂದು ಘಟಸರ್ಪ ಬಂದಿತಾದ್ದರಿಂದ ಹೆದರಿ ಶ್ರೀಗಳವರ ಹತ್ತಿರ ಬಂದ. ಅವರು ಮೂರು ದಿನ ಅಲ್ಲಿಯೇ ದೇವರ ಪೂಜೆ ಮಾಡಿದರು. ಸರ್ಪವು ಪ್ರತಿ ದಿನ ಬಂದು ಅವರು ಕೊಟ್ಟ ಹಾಲನ್ನು ಕುಡಿದು ಹೋಗುತ್ತಿತ್ತು. ಸರ್ಪವು ಓರ್ವ ಬ್ರಾಹ್ಮಣನ ಮೂಲಕ ಮಾಡಿದ, ಸೂಚನೆಯ ಮೇರೆಗೆ ಮೂಲೆಯ ಒಂದು ನೆಲವನ್ನು ಅಗಿಸಲಾಗಿ ೬ ತಪ್ಪೇಲಿಯಷ್ಟು ಧನ-ಕನಕ ಶೋಧವಾಯಿತು. (ಆಗ ಮಠಕ್ಕೆ ದೊರಕಿದ ಅರ್ಧದಷ್ಟು ಬೆಳ್ಳಿ-ಬಂಗಾರದಿಂದ ಶ್ರೀಗಳು ಟಂಕಸಾಲೆ ನಿರ್ಮಿಸಿ ನಾಣ್ಯ ಮಾಡಿಸಿದರೆಂದು ಮರಾಠೀ ಗ್ರಂಥದಲ್ಲಿ ಉಕ್ತವಾಗಿದೆ.)

೫. ಶ್ರೀ ಸತ್ಯಬೋಧತೀರ್ಥರು ಪ್ರವಚನ ಮಾಡುವ ಕಾಲಕ್ಕೆ ಒಂದು ಕಪಿ ಬರುತ್ತಿತ್ತು. ಯಾವ ಸದ್ದು ಮಾಡದೇ ಕುಳಿತಿರುತ್ತಿತ್ತು. ಅವರು ಕೊಡುವ ಹಣ್ಣನ್ನು ತಿನ್ನುತ್ತಿತ್ತು. ತೀರ್ಥ ಸಂಪ್ರೋಕ್ಷಣೆ ಆದ ಮೇಲೆ ಹೊರಟು ಹೋಯಿತು. ಅದು ವಾಯುದೇವರೇ ಎಂದು ಒಂದೆಡೆ ಹೇಳಿಕೆ ಇದ್ದರೆ ಇನ್ನೊಂದೆಡೆ ಪೂರ್ವಜನ್ಮದ ಪಾಪದಿಂದ ಓರ್ವ ಆಚಾರ್ಯರು ಕಪಿಜನ್ಮ ತಾಳಿದ್ದರೆಂದು ಶ್ರೀಗಳವರ ಕೃಪೆಯಿಂದ ಅದು ನೀಗಿತೆಂದೂ ಹೇಳಲಾಗಿದೆ. (ತೀರ ಈಚೆಗೆ ಶ್ರೀ ಬನ್ನಂಜೆ

ಗೋವಿಂದಾಚಾರ್ಯರು ಪ್ರವಚನ ಮಾಡುತ್ತಿದ್ದಾಗ ಎರಡು ದಿನ ಒಂದು ಕಪಿ ಬಂದು, ಏನೂ ಗದ್ದಲ ಮಾಡದೇ ಹೊರಟು ಹೋಯಿತೆಂಬುದನ್ನು ನೆನೆಯಬಹುದು.)

೬. ಶ್ರೀಗಳವರನ್ನು ಡಕಾಯಿತರು ಮುತ್ತಿದ್ದು ಹಾಗೂ ಮಾಂಸದ ಕರಣೆಗಳನ್ನು ಪುಷ್ಪವಾಗಿ ಪರಿವರ್ತಿಸಿದ್ದು ಎಂಬೆರಡು ಘಟನೆಗಳನ್ನು ಇತರ ಕೆಲವು ಯತಿಗಳಿಗೆ ಹೇಳಿದ್ದಂತೆ ಶ್ರೀ ಸತ್ಯಬೋಧರಿಗೂ ಅನ್ವಯಿಸಿದುದು ಪ್ರಚಾರದಲ್ಲಿದೆ.

೭. ಸವಣೂರಿನ ವಿಷ್ಣುತೀರ್ಥದಲ್ಲಿ ಗಂಗೆ ಅವತರಿಸಿದ ಪ್ರಸಂಗ. ಇದು ಮಾತ್ರ ಅವರ ಮೊತ್ತಮೊದಲಿನ ಚರಿತ್ರ ಕೃತಿಯಿಂದ ಈಚಿನವರೆಗೂ ಉಲ್ಲೇಖಗೊಂಡಿದೆ. ಆ ಸಂಗತಿ ಹೀಗಿದೆ: ಹಬ್ಬ-ಹರಿದಿನಗಳಲ್ಲಿ ಶ್ರೀಗಳವರು ಸ್ನಾನಕ್ಕೆಂದು ಆರು ಮೈಲು ದೂರವಿರುವ ವರದಾ ನದಿಗೆ ಹೋಗುತ್ತಿದ್ದರು. ಪಾದಚಾರಿಯಾಗಿ ಅವರು ಹೊರಟಾಗ ಅನೇಕರು ಅವರನ್ನು ಅನುಸರಿಸಿ ಜೊತೆಗಿರುತ್ತಿದ್ದರು. ಅವರಿಗೆಲ್ಲ ಪುರಾಣೋಕ್ತ ಸರಸವಾದ ಕತೆಗಳನ್ನು ಹೇಳುತ್ತಿದ್ದರಂತೆ. ನಿತ್ಯವೂ ಮಠದ ಬಳಿಯಲ್ಲಿರುವ ದೊಡ್ಡ ಬಾವಿಯಲ್ಲಿ ಸ್ನಾನ ಮಾಡುತ್ತಿದ್ದರು. ಒಮ್ಮೆ ಓರ್ವ ಗೃಹಸ್ಥನ ಕನಸಿನಲ್ಲಿ ಭಾಗೀರಥಿಯು ಪ್ರತ್ಯಕ್ಷಳಾಗಿ, ನನ್ನನ್ನೂ ಶ್ರೀಗಳ ಸ್ನಾನದ ಜಾಗಕ್ಕೆ ಕರೆದುಕೊಂಡು ಹೋಗೆಂದು ಹೇಳಿದ ಹಾಗಾಯಿತಂತೆ. ನಿಜ ಸಂಗತಿಯನ್ನು ಅರಿತುಕೊಂಡವರಾಗಿ ಶ್ರೀಗಳು ಅಲ್ಲಿಗೆ ಹೋದಾಗ, ದಂಡೆಯ ಮೇಲಿದ್ದ ಔದುಂಬರ ವೃಕ್ಷದ ಕೆಳದಿಂದ ಅಂತರ್ಜಲವು ಭರದಿಂದ ಉಕ್ಕಿ ಹರಿಯತೊಡಗಿತು. ಶ್ರೀಗಳಾದಿಯಾಗಿ ಎಲ್ಲರೂ ಕೌತುಕಾನಂದದಿಂದ ನೋಡುತ್ತಿದ್ದರು. ಶ್ರೀಗಳು ಮೊದಲಿಗೆ ಸ್ನಾನ ಮಾಡಿದರು. ಸುವಾಸಿನಿಯರು ಗಂಧಪುಷ್ಪಾದಿಗಳಿಂದ ಪೂಜೆಗೈದರು. ಅಂದಿನಿಂದ ಆ ಬಾವಿಗೆ ವಿಷ್ಣುತೀರ್ಥವೆಂಬ ಹೆಸರಾಯಿತು. ಅದಕ್ಕೆ ಸೂಕ್ತವಾದ ಪಾವಟಿಗೆಗಳನ್ನು ನಿರ್ಮಿಸಲಾಯಿತು.

ಶ್ರೀಶುಭಕೃತ್ ಸಂವತ್ಸರದ (ಶಕವರ್ಷ ೧೭೦೬) ಫಾಲ್ಗುಣ ವದ್ಯ ದ್ವಿತೀಯೆಯಂದು ಶ್ರೀಗಳಿಗೆ ದೇಹಾಲಸ್ಯ ತೋರಿತು. ಕೆಲದಿನಗಳ ಮುಂಚೆ, ಹಾವೇರಿಯ ರಾಮಾಚಾರ್ಯರೆನ್ನುವವರಿಗೆ ಸತ್ಯಸಂಧರೆಂದು ನಾಮಕರಣ ಮಾಡಿ ಸನ್ಯಾಸಾಶ್ರಮವನ್ನು ಕೊಟ್ಟಿದ್ದರು. ಆ ದಿನ ಬೆಳಿಗ್ಗೆ ಶ್ರೀಗಳು ಸ್ನಾನಮಾಡಿ, ಪ್ರಣವಾದಿ ಮಂತ್ರಗಳನ್ನು ಜಪಿಸುತ್ತ ಬಹಿರ್ವ್ಯಾಪಾರಶೂನ್ಯರಾಗಿ ಪರಮಾತ್ಮನ ಪಾದಾರವಿಂದವನ್ನು ಸೇರಿದರು.

ಶ್ರೀಸತ್ಯಬೋಧರು ಬದುಕಿದ್ದ ಕಾಲವು ಹಲವಾರು ರಾಜಕೀಯ ಸಂಘರ್ಷಗಳಿಂದ ಕೂಡಿದ್ದಿತು. ಶ್ರೀಗಳವರು ತಮ್ಮ ತಪಸ್ಸಿದ್ಧಿಯ ವ್ಯಕ್ತಿತ್ವದಿಂದ ಅವನ್ನು ನಿವಾರಿಸಿ ಯುದ್ಧ ಪ್ರಸಂಗಗಳನ್ನು ತಪ್ಪಿಸಿ ಶಾಂತಿದೂತರಾಗಿ ಕೆಲಸ ಮಾಡಿದರು. ಆಗ ರಾಯರ ಮಠದಲ್ಲಿ ಮತ್ತಿತರ ಕಡೆಗಳಲ್ಲಿ ಎದ್ದಿದ್ದ ಧಾರ್ಮಿಕ ತಿಕ್ಕಾಟಗಳನ್ನೂ ಅವರು ಸರಿಪಡಿಸಿದರು. ಮಾಧ್ವತತ್ತ್ವಜ್ಞಾನದ ಪ್ರಸಾರವನ್ನಂತೂ ಅಖಂಡವಾಗಿ ಕೈಕೊಂಡರು. ಹರಿದಾಸರುಗಳನ್ನು ಮನವಾರೆ ಮೆಚ್ಚಿ ಆತ್ಮೀಯವಾಗಿ ಕಂಡರು. ಧಾರವಾಡ ಪರಿಸರದಲ್ಲಿ ದಾಸವಾಙ್ಮಯದ ಹಬ್ಬುಗೆಗೇ ಅವರೇ ಪ್ರೇರಕರು.

## ೨. ದಾಸವರ್ಯರು ಹಾಗೂ ಅವರ ಕೃತಿಗಳು

ಇಲ್ಲಿರುವ ಹಾಡುಗಳನ್ನು ಈ ರೀತಿ ವಿಭಾಗಿಸಿದೆ;

ಅ. ಶ್ರೀಸತ್ಯಬೋಧರ ಸಮಕಾಲೀನರು; ಎಂದರೆ ೧೮ನೆಯ ಶತಮಾನದ ಉತ್ತರಾರ್ಧ ಕಾಲದವರು. ಇವರೆಲ್ಲ ಶ್ರೀವಿಜಯದಾಸರ ಶಿಷ್ಯರು ಮತ್ತು ಪ್ರಶಿಷ್ಯರು; ಶ್ರೀಸತ್ಯಬೋಧರನ್ನು ಕಂಡವರು.

ಆ. ೧೯/೨೦ ಶತಮಾನದವರು. ಸವಣೂರಿಗೆ ಆಗಾಗ

ಹೋಗಿ ಬಂದವರು. ಶ್ರೀ ಸತ್ಯಬೋಧರ ಪ್ರಭಾವಲಯ ವಿಸ್ತರಿಸಿದಂತೆಲ್ಲ ಅದನ್ನು ತಮ್ಮ ಕೀರ್ತನೆಗಳಲ್ಲಿ ಬಣ್ಣಿಸಿದರು.

ಇ. ಅನಂತರ ಎಂದರೆ ಇಪ್ಪತ್ತನೆಯ ಶತಮಾನದಲ್ಲಿ ಇನ್ನು ಕೆಲವರು ಶ್ರೀಗಳವರನ್ನು ಸ್ತುತಿಸಿದ್ದಾರೆ. ಆದರೆ ಇವರು ದಾಸದೀಕ್ಷೆಯನ್ನು ವಹಿಸಿದವರಲ್ಲ. ದಾಸಪರಂಪರೆಯಲ್ಲಿಯೇ ಹಾಡು ರಚಿಸಿದ ಲೌಕಿಕರು.

ಈ. ಶ್ರೀ ಸತ್ಯಬೋಧರ ಸಮಗ್ರ ಜೀವನವನ್ನು ಚಿತ್ರಿಸುವ ಕವನಗಳು.

## ಅ. ಸಮಕಾಲೀನರು

### ವಿಜಯದಾಸರು

ಹರಿದಾಸ ಸಾಹಿತ್ಯವನ್ನು ಪುನರುಜ್ಜೀವನಗೊಳಿಸಿದ ವಿಜಯದಾಸರ ಹಾಡಿನಿಂದಲೇ ಈ ಸಂಗ್ರಹ ಮೊದಲಾಗುತ್ತದೆ. ಅವರು ತಮ್ಮ ಹಾಡಿನಲ್ಲಿ ಕಾವ್ಯಸಾಮರ್ಥ್ಯಧೀರರು ಎಂದು ಶ್ರೀಸತ್ಯಬೋಧರನ್ನು ವರ್ಣಿಸಿದ್ದಾರೆ. ಇದರರ್ಥ ಶ್ರೀಪಾದರಾಜಾದಿ ಯತಿಗಳಂತೆ ಇವರೂ ಕೀರ್ತನೆಗಳನ್ನು ರಚಿಸಬಹುದೆ? ಆ ಮುಂದಿನ ಶಿರಿವಿಠಲರ ಹಾಡಿನಲ್ಲಿಯೂ ಸತ್ಯಬೋಧರನ್ನು ಕವಿವರ್ಯ ಎಂದು ವರ್ಣಿಸಿದ್ದಿದೆ.

### ಗೋಪಾಲದಾಸರು

ಗೋಪಾಲದಾಸರ ಕೃತಿರಚನೆಯ ಹಿಂದೆ (ಸಂ.೨) ವಿಶೇಷ ಘಟನೆಯೊಂದಿದೆ. ಒಮ್ಮೆ ರಾಯಚೂರಿಗೆ ಶ್ರೀಗಳು ಆಗಮಿಸಿದಾಗ ಗೋಪಾಲದಾಸರು ತಮ್ಮಿಬ್ಬರ ಬಂಧಗಳೊಡನೆ ಭೆಟ್ಟಿಯಾದರು ಶ್ರೀಗಳವರು - ಮೋಜಿಗಾಗಿಯೇ ಇರಬೇಕು - ನೀವು ಒಬ್ಬೊಬ್ಬರು ಒಂದೊಂದು ನುಡಿಯನ್ನು ರಚಿಸಿ ಪೂರ್ತಿ ಹಾಡನ್ನು ಹೇಳಿರಿ

ಎಂದರಂತೆ. ವಿಷಯ ಯಾವುದೂ ಆದೀತು! ಸರಿ, ಶ್ರೀಗಳವರನ್ನೇ ಕುರಿತು ಒಂದೊಂದು ನುಡಿ ರಚಿಸಿದರು. ಪಲ್ಲವಿ ಹಾಗೂ ಕೊನೆಯ ನುಡಿ ಗೋಪಾಲದಾಸರದು. ನಡುವಿನವು ಸೀನಪ್ಪ ಮತ್ತು ದಾಸಪ್ಪ ಅವರ ರಚನೆ. ಹರಿದಾಸತ್ರಯದ ಈ ಸ್ವೋಪಜ್ಞತೆ ಶ್ರೀಗಳವರಿಗೆ ಮೆಚ್ಚಿಕೆಯಾಗಿರಲು ಸಾಕು.

ಈ ಹಾಡಿನಲ್ಲಿ ಸ್ವಾಮಿಗಳು ಕಾಮನ ಮದವನ್ನು ಮರ್ದಿಸಿದ, ಅರ್ಥಾತ್ ಅವರ ಸನ್ಯಾಸದ ವಿಷಯ ಬಂದಿದೆ. ಆಗ ಕಾಮನೊಂದಿಗೆ ಅವರ ಪರಿವಾರವೂ ಪರಾಭವ ಹೊಂದುತ್ತದೆ. ಕ್ರೋಧಾದಿಗಳು (ಕಾಮ, ಕ್ರೋಧ, ಲೋಭ ಇತ್ಯಾದಿ) ಹೆದರಿ ದೂರದಲ್ಲಿ ನಿಂತು ನಮಿಸಿ ನಿರ್ಗಮಿಸುತ್ತವೆ. ಶ್ರೀಗಳವರ ದಾನ ಧರ್ಮ ಮತ್ತೊಂದು ನುಡಿಯಲ್ಲಿ ವ್ಯಕ್ತವಾಗಿದೆ. ಅವರನ್ನು ಕಂಡು ದಾನಶೂರ ಕರ್ಣನು ರವಿಮಂಡಲವನ್ನು ಸೇರುತ್ತಾನೆ. ಇತ್ತ ಅವರ ಪಾಂಡಿತ್ಯಕ್ಕೆ ಶೇಷನು ಶಿರಬಾಗಿ ಪಾತಾಳ ಲೋಕವನ್ನು ಸೇರುತ್ತಾನೆ. ಈ ಮನೋಜ್ಞವಾದ ಕಲ್ಪನೆಗೆ ಕಾವ್ಯಶಾಸ್ತ್ರದಲ್ಲಿ ಕಾವ್ಯಲಿಂಗಾಲಂಕಾರ ಎಂಬ ಹೆಸರಿದೆ.

ಆ ಮುಂದಿನ ಮೋಹನದಾಸರ ಹಾಡಿನಲ್ಲಿಯೂ ಸ್ವಾಮಿಗಳ ಕಠೋರ ಸನ್ಯಾಸದ ಬಗೆ ವರ್ಣಿತವಾಗಿದೆ.

## ಜಗನ್ನಾಥದಾಸರು

ಜಗನ್ನಾಥದಾಸರಿಗೆ ಶ್ರೀಸತ್ಯಬೋಧರ ಮೇಲೆ ಅತೀವ ಗೌರವ ಹಾಗೂ ಮಮತೆ. ಅವರ ನೆನಪಾದಾಗೊಮ್ಮೆ ಸವಣೂರಿಗೆ ಹೋಗಿ ಬರುತ್ತಿದ್ದಂತೆ ಕಾಣುತ್ತದೆ. ಕರ್ಜಗಿಯಲ್ಲಿ ದಾಸಪ್ಪನನ್ನು (ಆ ಮುಂದೆ ಶ್ರೀದವಿಠಲರು) ಕಂಡದ್ದು ಸವಣೂರಿಗೆ ಹೊರಟಿದ್ದಾಗಲೇ, ತಮ್ಮ ಹರಿಕಥಾಮೃತಸಾರವನ್ನು ಶ್ರೀಗಳವರ ಮುಂದೆ ಓದಿ ತೋರಿಸಿರಬೇಕು. ಅಂತೂ ಜಗನ್ನಾಥದಾಸರ ಇಲ್ಲಿಯ ಸ್ತುತಿರೂಪದ ಹಾಡುಗಳನ್ನು ಗಮನಿಸಿದರೆ ಅವರಿಬ್ಬರಲ್ಲಿಯ ಒಡನಾಟ ಆತ್ಮೀಯವಾದದ್ದು ಎನಿಸುವುದು.

ಇವರೆಲ್ಲ ಸವಣೂರಿಗೆ ಹೋಗಿ ವೃಂದಾವನದ ಸಂದರ್ಶನ ಪಡೆದ ನಿಮಿತ್ತದಿಂದ ಕೃತಿರಚನೆ ಮಾಡಿದ್ದಾರೆ ಎಂಬುದನ್ನು ನೆನೆದಿರಬೇಕು.

ಅಕಾರಾದಿ ಕ್ರಮದಲ್ಲಿ ಮೊದಲಿಗೆ ಬಂದ '**ಉಡುಪಿ ಕೃಷ್ಣ**' ಅಂಕಿತದ ಹಲವಾರು ಹಾಡುಗಳು ಅಲ್ಲಲ್ಲಿ ಕಾಣಸಿಗುತ್ತದೆ. ಅವುಗಳಲ್ಲಿ ಇಲ್ಲಿಯದೂ ಒಂದು. ಆದರೆ ಇವರ ನಿಜ ಹೆಸರೇನು, ಎಲ್ಲಿಯವರು ಎಂಬುದು ತಿಳಿದು ಬಂದಿಲ್ಲ.

'**ಕಾರ್ಪರ ನರಹರಿ**' ಇವರು ರಾಯಚೂರು ಜಿಲ್ಲೆಯ ಕೊಪ್ಪರ ಗ್ರಾಮದವರು. ಹೆಸರು ಗಿರಿಯಾಚಾರ್ ಎಂಬುದು. ಕಾಲಮಾನದಿಂದ ತೀರ ಈಚಿನವರು (೧೮೯೯-೧೯೭೯), ತಮ್ಮ ಹಾಡಿನಲ್ಲಿ ( ಕ್ರ. ೧೧ ) ಶ್ರೀಸತ್ಯಬೋಧರ ಬಳಿ ಕಪಿಯೊಂದು ಬಂದು ಕುಳಿತಿರುತ್ತಿದ್ದ ಘಟನೆಯನ್ನು ಕಾಣಿಸಿದ್ದಾರೆ. ಪೂರ್ವಜನ್ಮದಲ್ಲಿ ಕೋನೇರಿ ಆಚಾರ್ಯರಾಗಿದ್ದು ಯತಿಗಳ ಕೃಪೆಯಿಂದ ಮುಕ್ತಿಯನ್ನು ಪಡೆದರಂತೆ.

**ಗುರುಗೋವಿಂದವಿಠಲ**ರೂ ಈಚಿನವರೇ (೧೮೯೪-೧೯೮೦) ಪೂರ್ಣ ಹೆಸರು ಎಂ.ಆರ್ ಗೋವಿಂದರಾವ್. ಮೈಸೂರಲ್ಲಿದ್ದುಕೊಂಡು ಹರಿದಾಸರ, ಆ ಸಾಹಿತ್ಯದ ಪ್ರಸರಣ ಕಾರ್ಯದಲ್ಲಿ ಅನನ್ವಿತ ಕೆಲಸ ಮಾಡಿದವರು. ಅನೇಕ ದಾಸ, ಭಗವದ್ಭಕ್ತರುಗಳ ಚರಿತ್ರೆ ಬರೆದಿದ್ದಾರೆ. ಹಾಗೇನೆ ತಂದೆ ಮುದ್ದುಮೋಹನವಿಠಲರಿಂದ ಅಂಕಿತ ಪಡೆದು ಸಾವಿರದಷ್ಟು ಕೀರ್ತನೆಗಳನ್ನು ರಚಿಸಿದ್ದಾರೆ. ಇಲ್ಲಿ ಬಂದಿರುವ ಅವರ ಕೃತಿಯಲ್ಲಿ ( ಕ್ರ. ೧೨ ) ಶೀಗಳಿಗೆ ಸರ್ಪ ಕಾಣಿಸಿಕೊಂಡು ಅದರ ಅಜ್ಞೆಯಿಂದ ಗುಪ್ತ ಧನದ ಪತ್ತೆ ಹಿಡಿದ ಪ್ರಸಂಗ ಉಲ್ಲೇಖಗೊಂಡಿದೆ.

**ತಂದೆವರದಗೋಪಾಲವಿಠಲ**ರು ಚಿಕ್ಕ ವಯಸ್ಸಿನಲ್ಲಿಯೇ ಹರಿದಾಸರಾಗಿ ಬಾಳಿದವರು. ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕಿನ ಕಳಸ ಗ್ರಾಮದ ಪಾಟೀಲ / ಗೌಡ ಮನೆತನದವರು.

ಶ್ರೀ ವಾದಿರಾಜ ಯತಿಗಳ ಆತ್ಯಂತಿಕ ಭಕ್ತರು. ನೂರಾರು ಕೀರ್ತನೆಗಳನ್ನು ರಚಿಸಿದ್ದರೂ ಅಜ್ಞಾತರಾಗಿಯೆ ಉಳಿದಿದ್ದಾರೆ. ಅವರ ಕಳಸದ ಮನೆಯಲ್ಲಿರುವ ಹಸ್ತಪ್ರತಿಯಿಂದ ಇಲ್ಲಿಯ ಹಾಡನ್ನು ಎತ್ತಿಕೊಂಡಿದೆ.

**ನರಸಿಂಹವಿಠಲರ** ಕೃತಿಗಳೂ ಇದುವರೆಗೆ ಅಪ್ರಕಟಿತ. ಅವರು ಧಾರವಾಡ ಜಿಲ್ಲೆಯ ಕುಂಚೂರ ಗ್ರಾಮದವರು. ಶಿಕ್ಷಕ ವೃತ್ತಿಯಲ್ಲಿದ್ದರೆಂಬ ಅಂಶವೊಂದನ್ನು ಬಿಟ್ಟರೆ ಇನ್ನಾವ ವಿಚಾರವೂ ಅವರ ಬಗ್ಗೆ ತಿಳಿದು ಬಂದಿಲ್ಲ. ಸುಮಾರು ೧೩೦ ಹಾಡುಗಳನ್ನು ರಚಿಸಿದ್ದು ಅವರ ಮೊಮ್ಮಗನ ಬಳಿ ಇದ್ದ ಹಸ್ತಪ್ರತಿಯಿಂದ ಇಲ್ಲಿಯ ಮೂರು ಹಾಡುಗಳನ್ನು ತೆಗೆದುಕೊಂಡಿದೆ. 'ಬೋಧರ ನೋಡಿರ್ಕೆ' ಎಂದು ಮೊದಲಾಗುವ ಹಾಡಿನಲ್ಲಿ ಶ್ರೀಸತ್ಯಬೋಧರನ್ನು ನಾನಾ ಬಗೆಯ ವಿಶೇಷಣಗಳಿಂದ ಸ್ತುತಿಸಿದ್ದಾರೆ. ಕ್ರ. ೧೬ರ ಕೃತಿಯಲ್ಲಿ ರಾಮದೇವರ ಪೂಜೆಯ ಬಗೆಯನ್ನು ವರ್ಣಿಸಿದ್ದಾರೆ. ಶ್ರೀಗಳು ನಿತ್ಯಸ್ನಾನ ಮಾಡುತ್ತಿದ್ದ ಬಾವಿಯ ಜಾಗ ಘಟಿಕಾರ ಎನ್ನುವವರ ಮನೆತನಕ್ಕೆ ಸೇರಿದ್ದು, ನರಸಿಂಹವಿಠಲರು ಅದನ್ನು ಸ್ಥಿರೀಕರಿಸಿದ್ದಾರೆ.

**ಭೀಮೇಶಕೃಷ್ಣ** ಮುದ್ರಿಕೆಯ ಹರಪನಹಳ್ಳಿ ಭೀಮವ್ವನ ಹೆಸರು ಸುಪರಿಚಿತವಾದದ್ದು. ಹಲವಾರು ಕ್ಷೇತ್ರಗಳನ್ನು ಸಂದರ್ಶಿಸಿ ಆ ಆ ಕ್ಷೇತ್ರದ ದೈವತ ಇಲ್ಲವೆ ಯತಿಗಳನ್ನು ಸ್ತುತಿಸಿದ್ದಾರೆ. ಆ ಮುಂದೆ ಬರುವ 'ಉದಯರಾಗ'ವನ್ನು ಅದಾರು ರಚಿಸಿದ್ದಾರೆಂಬುದು ಸ್ಪಷ್ಟವಿಲ್ಲ. (ಕ. ೧೮) ಕೊನೆಯಲ್ಲಿ 'ಶ್ರೀರಂಗನಾಥ' ಎಂಬ ಪದವೇನೊ ಇದೆ. ಇದರ ಮೂರನೆಯ ನುಡಿಯಲ್ಲಿ 'ಮೂಲರಾಮನನ್ನು ನೋಡಲು ದೇವತೆಗಳು ಬಂದಿದ್ದಾರೆ. ಆದ್ದರಿಂದ ಏಳಯ್ಯ ಗುರುವರೇಣ್ಯ' ಎಂಬ ಕಲ್ಪನೆ ಚೆನ್ನಾಗಿದೆ.

**ರಮಾಪತಿವಿಠಲರು** ಕರ್ಜಗಿಯ ಸುಪ್ರಸಿದ್ಧ ದಾಸರಾದ ಶ್ರೀದವಿಠಲರ ತಂಗಿಯ ಮಗ. ನರೇಗಲ್ಲ ರಾಮಣ್ಣ ಎನ್ನುವುದು

ಅವರ ಪೂರ್ವದ ಹೆಸರು. ಸರಕಾರೀ ನೌಕರಿಯಲ್ಲಿದ್ದರು. ಆದರೆ ಒಲವೆಲ್ಲ ದಾಸ ಸಾಹಿತ್ಯದ ಕಡೆಗೆ. ಕರ್ಜಗಿಯ ಇನ್ನೊಬ್ಬ ದಾಸರಾದ ತೀರ್ಥಪಾದವಿಠಲರಿಂದ ದಾಸದೀಕ್ಷೆ ವಹಿಸಿದರು. ಇಲ್ಲಿ ಬಂದ ಅವರ ಹಾಡಿನಲ್ಲಿ (ಕ. ೨೦), ಶ್ರೀ ಸತ್ಯಬೋಧರ ಜನನ, ಬಾಲ್ಯ ಮುಂತಾಗಿ ಹೇಳಿ ಅವರು ರಾತ್ರಿಯ ವೇಳೆ ಶಶಿಯನ್ನು ಸೂರ್ಯನನ್ನಾಗಿ ಮಾಡಿ ತೋರಿಸಿದವರೆಂದು ಅಲಂಕಾರಿಕವಾಗಿ ವರ್ಣಿಸಿದ್ದಾರೆ.

'ವೃಂದಾವನ ನೋಡಿರೊ' ಎಂಬ ಹಾಡಿನ ಅಂಕಿತ **ವಾಸ್ಯವಿಠಲ** ಎಂದಿದ್ದರೂ ಅವರು ಪೂರ್ವೋಕ್ತ ಕಲ್ಲೂರ ಸುಬ್ಬಣ್ಣದಾಸರೇನಲ್ಲ. ಏಕೆಂದರೆ ಈ ದಾಸರು ಶ್ರೀಸತ್ಯಬೋಧರ ಅನಂತರ ಪೀಠಸ್ಥರಾಗಿದ್ದ ಯತಿಗಳ ವೃಂದಾವನದ ಪ್ರಸ್ತಾಪ ಮಾಡಿದ್ದಾರೆ.

**ಸಿರಿವಿಠಲ** ಅಂಕಿತದ ಕಲಮದಾನಿ ನಾರಾಯಣರಾಯರು ೨೦ನೆಯ ಶತಮಾನದಲ್ಲಿದ್ದವರು. ದಾಸಸಾಹಿತ್ಯದ ಪುನರುಜ್ಜೀವನ ಕಾರ್ಯದಲ್ಲಿ ವಿಶೇಷವಾಗಿ ಶ್ರಮಿಸಿದವರು. ಅವರು ಬದರಿ ಹೋಗಿದ್ದ ದಾಸರ ಹಾಡುಗಳನ್ನು ಸಂಗ್ರಹಿಸಿದರು. ದಾಸಪೀಳಿಗೆಯನ್ನು ರೂಪಿಸಿದರು. ಹಿಂದಿನ ಹರಿದಾಸರ ಜೀವನ ವಿವರಗಳನ್ನು ಕಲೆಹಾಕಿದರು. ( ಅವರ ಮಗ ಗುರುರಾಯರು 'ಹರಿದಾಸರ ಕಥೆಗಳು' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ. ). Mystic Teachings of Haridasas of Karnataka ಎಂಬ ಗ್ರಂಥರಚನೆಯಲ್ಲಿ ಜೊತೆಗೂಡಿದ್ದರು. ಇದೆಲ್ಲಕ್ಕೆ ಮಿಗಿಲಾಗಿ ಸ್ವಯಂ ಕೀರ್ತನೆಗಳನ್ನು ರಚಿಸಿದ್ದಾರೆ. ಇಲ್ಲಿ ಬಂದಿರುವ ನಾಲ್ಕು ಹಾಡುಗಳು ಗುರುಗಳ ಬಗ್ಗೆ ಅವರಿಗಿದ್ದ ಭಕ್ತಿಭಾವವನ್ನು ಸುವ್ಯಕ್ತಗೊಳಿಸುವಂತಿದೆ. ವಿಶೇಷತಃ ೨೩ನೆಯ ಕ್ರಮಾಂಕದ ಹಾಡಿನಲ್ಲಿ ಗುರುಮಹಿಮೆಯನ್ನು ವಿನೂತನ ರೀತಿಯಲ್ಲಿ ಹೇಳಿದ್ದಾರೆ. ಅದನ್ನು ಶ್ರೀಸತ್ಯಬೋಧರಿಗೆ ಅನ್ವಯಿಸಿಯೆ ನೋಡತಕ್ಕುದು:

'ಗುರುವೊಲಿಯೆ ಹರಿಯೊಲಿವ' ಎಂದು ಮೊದಲಿಗೆ ಹೇಳಿ 'ಒಂದು ವೇಳೆ ಗುರುವು ನಮ್ಮನ್ನು ರಕ್ಷಿಸುತ್ತ ಇದ್ದರೆ ಹರಿಯು ನಮ್ಮ ಕಡೆ ಗಮನ ಕೊಡುವ ಅಗತ್ಯವಿಲ್ಲ. ಇಹದಲ್ಲಿ ಈ ರೀತಿ ಗುರುವಿನ ದಯವಿದ್ದರೆ ಪರದಲ್ಲಿ ನಾವು ಹರಿಕೃಪೆಯನ್ನು ಸುಲಭವಾಗಿ ನಿರೀಕ್ಷಿಸಬಹುದು. ಒಂದು ವೇಳೆ ಗುರು ನಮ್ಮ ಮೇಲೆ ರುಷ್ಟನಾದರೆ? ಆಗ ಹರಿ ನಮ್ಮ ಕಡೆಗೆ ಕಣ್ಣೆತ್ತಿಯೂ ನೋಡನು. ಇನ್ನು ಹರಿಯೇ ರುಷ್ಟನಾದರೆ? ಯೋಚನೆ ಬೇಡ; ಆಗ ಗುರುಕರುಣೆ ನಮ್ಮನ್ನು ರಕ್ಷಿಸಬಲ್ಲುದು!' ನಿಜಕ್ಕೂ ಹೃದ್ಯವಾದ ಚತುರೋಕ್ತಿ ಇಲ್ಲಿದೆ.

ಮುಂದಿನ ಕೀರ್ತನೆಯಲ್ಲಿ, ಅವರು ಶ್ರೀ ಸತ್ಯಬೋಧರ ನಾಲ್ವತ್ತು ವರ್ಷದ ಪೀಠಾರೋಹಣವನ್ನಂತೂ ಪ್ರಸ್ತಾಪಿಸಿದ್ದಾರೆ. ಅನಂತರ ಶತಷಷ್ಟಾಬ್ಧಿ - ಎಂದರೆ ೧೬೦ ವರ್ಷ ಕಾಲ ವೃಂದಾವನದಲ್ಲಿ ಸ್ಥಿರವಾಗಿ ಉಳಿದು ಆರಾಧನೆಗೊಳ್ಳುತ್ತಿದ್ದರಾಗಿ ಕಾಣಿಸಿದ್ದಾರೆ. ವೃಂದಾವನಸ್ಥರಾದ ವರ್ಷ ೧೭೮೩ಕ್ಕೆ ಈ ೧೫೦ ವರ್ಷ ಸೇರಿಸಿದರೆ ೧೯೪೩ ನೆಯ ಇಸವಿಯು ನಿಷ್ಪನ್ನವಾಗುತ್ತದೆ. ಹೀಗೆ ದಾಸರ ಅರಿವಿಲ್ಲದಂತೆಯೇ ತಮ್ಮ ಈ ಕೃತಿರಚನೆಯ ವರ್ಷವನ್ನು ಹೇಳಿದಂತಾಯಿತು!

ಇದೇ ದಾಸರ ೨೪(ಅ) ಕ್ರಮಾಂಕದ ಹಾಡಿನಲ್ಲಿ ವಿಷ್ಣುತೀರ್ಥ ಎಂಬವರ ಹೆಸರಿದೆ. ಅವರು ವಾನಪ್ರಸ್ಥರಾಗಿ ಹನ್ನೆರಡು ವರ್ಷ ಕಾಲ ಅಡವಿಯ ಏಕಾಂತ ಬಯಸಿ ಇದ್ದರಾದ್ದರಿಂದ ಅವರು ಅಡವಿ ವಿಷ್ಣುತೀರ್ಥ ಎಂದೇ ಹೆಸರಾಗಿದ್ದಾರೆ. ಮುನವಳ್ಳಿ ಎಂಬಲ್ಲಿ ಹನ್ನೆರಡು ಸಲ ಸುಧಾಪ್ರವಚನ ಮಂಗಳ ಮಾಡಿದ ಮಹನೀಯರಿವರು. ಇವರಿಗೆ ಸನ್ಯಾಸಾಶ್ರಮ ಕೊಟ್ಟವರು ಶ್ರೀ ಸತ್ಯವರರು. (೧೭೯೪-೯೭) ಆ ಮುಂಚೆ ಶ್ರೀ ಸತ್ಯಬೋಧರನ್ನು ಕಂಡಿದ್ದರು.

**ಹನುಮನಯ್ಯ** ಎಂಬ ಮುದ್ರಿಕೆ ಯಾರದು ? ಈ ಹನುಮ

ಕದರ ಮಂಡಲಗಿ ಹನುಮಂತ ದೇವರು ಎಂದೆನಿಸುವುದು. ಅಲ್ಲಿ ಇದ್ದ ಭೀಮಾಚಾರ್ಯರೆಂಬವರು ಶ್ರೀಸತ್ಯಬೋಧರಲ್ಲಿ ಅಪಾರ ಭಕ್ತಿಯುಳ್ಳವರಾಗಿದ್ದರು. ಆದರೆ ಹಾಡುಗಳನ್ನು ರಚಿಸಿದ್ದಾರೆ - 'ಕದರುಂಡಲಗಿ ಹನುಮಯ್ಯ' ಎಂಬ ನಿಶ್ಚಿತವಾದ ಮುದ್ರಿಕೆಯಿಂದ. ಅಂತೂ ಈ ಹನುಮನಯ್ಯ ಎಂಬುದರ ಬಗ್ಗೆ ವಿವರಗಳಿಲ್ಲ, ಆದರೆ ಬಂದಿದ್ದ ಇಲ್ಲಿಯ ಹಾಡುಗಳು ಚೆನ್ನಾಗಿವೆ.

ಈ ನಿಮಿತ್ತದಿಂದ ಭೀಮಾಚಾರ್ಯರ ಬಗ್ಗೆ ಇನ್ನಷ್ಟು ವಿವರಗಳನ್ನು ಕೊಡಬೇಕೆನಿಸುವುದು. ಅವರನ್ನು ಹಿರೇ ಆಚಾರ್ಯರೆಂದು ಕರೆಯುತ್ತಿದ್ದರು. ಕದರಮಂಡಲಗಿಯ ಹನುಮಪ್ಪನ ಸೇವೆಯಲ್ಲಿ ಸದಾ ನಿರತರಾಗಿದ್ದ ಅವರಿಗೆ. ಎಲ್ಲೆಲ್ಲಿಂದಲೂ ಜಮೀನಿನ ದತ್ತಿಗಳು ಬಂದಿದ್ದವು. ಸವಣೂರಿಗೆ ಕದರಮಂಡಲಗಿಯೂ ಹತ್ತಿರದ ಊರೇ. ಶ್ರೀಗಳವರ ದರ್ಶನಕ್ಕೆ ಹೋಗುತ್ತಿದ್ದರು. ಆಚಾರ್ಯರ ಧರ್ಮನಿಷ್ಠೆ, ಹರಿದಾಸ ಪ್ರವೃತ್ತಿ ಅವರಿಗೆ ತುಂಬಾ ಮೆಚ್ಚಿಗೆಯಾಗಿತ್ತು. ಶ್ರೀರಾಮದೇವರ ಕಾಲಕ್ಕೆ ಹತ್ತಿರವೇ ಕೂರಿಸಿಕೊಂಡು ತೀರ್ಥಪ್ರಸಾದ ಕೊಡುವಷ್ಟು ಆಚಾರ್ಯರಿಗೆ ಪ್ರಾಶಸ್ತ್ಯವೀಯುತ್ತಿದ್ದರೆಂದು ಪ್ರತೀತಿ. ಮಠದಲ್ಲಿಯೇ ಇದ್ದವರಿಗೆ ಆ ಕಾರಣದಿಂದ ಅಸೂಯೆ. ಒಮ್ಮೆ ಶ್ರೀಗಳು ಪೂಜೆ ಮುಗೀತಾ ಬಂದ ಕಾಲದಲ್ಲಿ ತಮ್ಮ ಮುಷ್ಟಿಯಲ್ಲಿ ಒಂದು ವಸ್ತುವನ್ನು ಮುಚ್ಚಿ 'ಇದರಲ್ಲೇನಿದೆ, ಹೇಳಿ ನೋಡುವಾ' ಎಂದು ನೆರೆದವರಿಗೆ ಕೇಳಿದರಂತೆ. ಆಗ ಭೀಮಾಚಾರ್ಯರು, ನರಸಿಂಹಮುದ್ರಾಂಕಿತ ಸಾಲಿಗ್ರಾಮವೆಂದು ಗುರುತಿಸಿದಾಗ, ಶ್ರೀಗಳು ಮುಷ್ಟಿಯನ್ನು ಬಿಚ್ಚಿ ಅಂಗೈಯಲ್ಲಿ ಹಿಡಿದರು. ಭೀಮಾಚಾರ್ಯರು ಭಾವಪರವಶರಾಗಿ ಬಾಯಿ ತೆರೆದಂತೆ ಕಾಣುವ ನರಸಿಂಹದೇವರನ್ನು ಕಲ್ಪಿಸಿ ಈ ಹಾಡನ್ನು ರಚಿಸಿ ಹೇಳಿದರು :

ಬಾಯಿ ತೆರೆದ ಬಗೆಯೇನೊ ದೇವರ ದೇವ
ತೋಯದಳ ನೇತ್ರನೇ ನೀಯೆನಗಿದು ಪೇಳೊ ॥ ಪ ॥

ಅಸುರನ ಉದರವ ಹಸನಾಗಿ ಬಗೆವಾಗ
ಹಸಿದು ಬಾಯಿ ತೆರೆದೆಯಾ
ಬಿಸಜಾಕ್ಷ ಭೂಮಂಡಲವು ಬಿಸರೊಳಿದ್ದ
ಉಬ್ಬಸ್ಸಿಗೆ ಬಾಯಿ ತೆರೆದೆಯಾ ॥ ೧ ॥

ಮಡದಿಯ ರೂಪಕ್ಕೆ ಮರುಳಾಗಿ
ಆದರಿಂದ ಬಿಡದೇ ಬಾಯ ತೆರೆದೆಯಾ
ದೃಢವಾದ ಪ್ರಹ್ಲಾದನ ಒಡೆಯಾ ರಕ್ಷಿಸು ಎಂಬೊ
ನುಡಿಗೆ ಬಾಯಿ ತೆರೆದೆಯಾ ॥ ೨ ॥

ಗುರು ಸತ್ಯಬೋಧರಾಯರ ನಿತ್ಯ ಭಜನೆಗೆ
ಬೆರೆತು ಬಾಯ ತೆರೆದೆಯಾ
ವರಕದರುಂಡಲಗಿ **ಹನುಮಯ್ಯ**ನೊಡೆಯನೇ
ಕರವ ಮುಗಿವೆ ಬಾಯ ಮುಚ್ಚು ಕರುಣಿಸಿ ॥ ೩ ॥

**ಹನುಮೇಶವಿಟ್ಠಲ**ರ ಬಗ್ಗೆ ಒಂದಿಷ್ಟು ಮಾಹಿತಿ ಲಭ್ಯವಿದೆ. ಅವರು ಮೂಲತಃ ಹಾವನೂರಿನ ಬುರ್ಲಿ ಮನೆತನದ ವೆಂಕಟೇಶ ನಾಯಕರು. ಹತ್ತಿರದ ಗುತ್ತಲದಲ್ಲಿ ರಾಘವೇಂದ್ರಸ್ವಾಮಿಗಳ ವೃಂದಾವನ ಸ್ಥಾಪಿಸಿದ್ದಾರೆ. ಕೋರ್ಟಿನಲ್ಲಿ ಕಾರಕೂನರಾಗಿ ವೃತ್ತಿಜೀವನ ನಡೆಸಿದ್ದರೂ ಹರಿದಾಸ ಪ್ರವೃತ್ತಿಯನ್ನು ಮೈಗೂಡಿಸಿಕೊಂಡು ಬೇರೆ ಊರುಗಳಲ್ಲಿ ಹಾಡುತ್ತಿದ್ದರು. ಅವರು ರಚಿಸಿದ ಕೃತಿಗಳು ಮುದ್ರಣಗೊಂಡಿವೆ. ಕೆಲವು ಶ್ರೀ ಸತ್ಯಬೋಧರನ್ನು ಕುರಿತೇ ಇವೆ. ಒಂದರಲ್ಲಿ ಅವರು, ಸ್ವಾಮಿಗಳು ೧೯ ವರ್ಷ ಸಂಚಾರದಲ್ಲಿ ಕಳೆದರೆಂದೂ ಅನಂತರದ ೨೧ ವರ್ಷಗಳನ್ನು ಸವಣೂರಲ್ಲಿಯೆ ಹೆಚ್ಚಾಗಿ ಕಳೆದರೆಂದೂ ಕಾಣಿಸಿದ್ದಾರೆ. (ಕೃ. ೩೧). ಒಂದು ಮಂಗವು ಸ್ವಾಮಿಗಳ ಹತ್ತಿರ ಬಂದು ಕೂಡುತ್ತಿತ್ತಷ್ಟೆ. ಅದರ ಪೂರ್ವಜನ್ಮದ ಹೆಸರು 'ಸೊನ್ನೆ ರಾಮಾಚಾರ್ಯ' ಎಂಬುದಾಗಿ ಹನುವೇಶವಿಠಲರು ಹೇಳುತ್ತಾರೆ. (ಬೇರೆಡೆ ಕೋನೇರಿಯಾಚಾರ್ಯ ಎಂದು ಬಂದಿದೆ.)

## ೩. ಲೌಕಿಕರು

ಮುಂಡರಗಿಯ **ಹರಿಸರ್ವೋತ್ತಮಚಾರ್ಯರು** ಆ ಭಾಗದಲ್ಲಿ ಸುಪ್ರಸಿದ್ಧ ಕೀರ್ತನಕಾರರೆಂಬುದಾಗಿ ಹೆಸರು ಮಾಡಿದ್ದರು. ತಮ್ಮ ಕಾರ್ಯಕ್ರಮದ ಪ್ರಾರಂಭದಲ್ಲಿ ಅವರು ಶ್ರೀ ಸತ್ಯಬೋಧ ಸುಪ್ರಭಾತವನ್ನು ಹೇಳುತ್ತಿದ್ದರಂತೆ. ( ಕ್ರ. ೩೧ ) ಆದರೆ ಅದನ್ನು ರಚಿಸಿದವರು ಅವರ ಮಗ **ಸುಶೀಲೇಂದ್ರ.** ಈ ಉದಯರಾಗವು ಭಾವಪೂರ್ಣವಾಗಿ ಮೂಡಿಬಂದಿದೆ.

**ಸು.ರಂ.ಎಕ್ಕುಂಡಿ**ಯವರಂತೂ ಖ್ಯಾತನಾಮ ಕವಿಗಳು. ಅವರ ಹಲವಾರು ಭಾವಗೀತಗಳು ಸಂಕಲನರೂಪದಲ್ಲಿ ಪ್ರಕಟಿತವಾಗಿವೆ. ಅವರ ಒಂದು ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಅಖಿಲ ಭಾರತ ಮಟ್ಟದ ಪುರಸ್ಕಾರ ದೊರೆತಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಶಾಲಾ ಶಿಕ್ಷಕರಾಗಿದ್ದರು. ಈಚೆಗೆ ತೀರಿಕೊಂಡರು. ಇಲ್ಲಿ ಬಂದಿರುವ ಸತ್ಯಬೋಧ ಸ್ತುತಿಪರ ಕವನ ( ಕ್ರ. ೩೨ ) ಹೊಸಗನ್ನಡ ರಚನೆಯಾಗಿ ವಿಶಿಷ್ಟತೆಯಿಂದ ಕೂಡಿದೆ.

ಇನ್ನುಳಿದ ವರಹವಿಠಲಾಂಕಿತ ಹಾಡುಗಳ ಹಿಂದೆ ಮೋಜಿನ ಪ್ರಸಂಗವಿದೆ. ಭಜನೆಯ ಹಾಡು ಹೇಳುವುದಾದರೆ ಅವುಗಳಿಗೆ ಮುದ್ರಿಕೆ ಇರಬೇಕು. ಮುದ್ರಿಕೆ ಇಲ್ಲದ ಹಾಡುಗಳನ್ನು ಹೇಳಬಾರದೆಂಬ ಪರಿಪಾಠವಿದೆ. ಆದರೆ 'ಒಳ್ಳೆಯ ಧಾಟಿಯ ಬೇರೊಂದು ಹಾಡು ಇದ್ದರೆ. ಅದೇ ಧಾಟಿಯಲ್ಲಿ ನಮ್ಮ ಸತ್ಯಬೋಧರ ಸ್ತುತಿಯುಳ್ಳದನ್ನು ನಾವೇ ರಚಿಸಬಹುದಲ್ಲವೆ; ಅದಕ್ಕೆ ಯಾವುದೋ ಒಂದು ವಿಠಲಾಂಕಿತ ಮುದ್ರಿಕೆ ಇರಿಸಿದರಾಯಿತು!' ಈ ಹಿನ್ನೆಲೆಯಲ್ಲಿ ರಚಿತವಾದ ಕೆಲವು ಹಾಡುಗಳು ಲೌಕಿಕರವೇ ಎಂದು ಬಗೆಯತಕ್ಕುದು.

ಚರಿತ್ರಾತ್ಮಕ ಕವನಗಳು ಎಂಬುದರಡಿಯಲ್ಲಿ ಬಂದ **ಪ್ರಸನ್ನ ಶ್ರೀನಿವಾಸ**ರ ಸತ್ಯಬೋಧ ಚರಿತ್ರೆ ಹಲವಾರು ದೃಷ್ಟಿಗಳಿಂದ

ವಿಶಿಷ್ಟವಾದದ್ದು ಮೊದಲನೆಯದು ಈ ದಾಸರು ತಮಿಳುನಾಡಿನಲ್ಲಿಯೆ ಇದ್ದವರು; ಮನೆ ಮಾತು ಕನ್ನಡವಾದರೂ ಕನ್ನಡದಲ್ಲಿ ಶಿಕ್ಷಣವನ್ನು ಪಡೆಯದೇ ಮನೆತನದ ಮಾಧ್ವ ಸಂಸ್ಕಾರ ಬಲದಿಂದ ನೂರಾರು ಹಾಡುಗಳನ್ನು ರಚಿಸಿದವರು. ಇನ್ನೊಂದು ವಿಶೇಷವೆಂದರೆ ೨೦ಕ್ಕೂ ಮೇಲ್ಪಟ್ಟು ಮಾಧ್ವಯತಿಗಳ ಸ್ತುತಿಪರ ಕೀರ್ತನೆಗಳನ್ನು ರಚಿಸಿದ್ದಾರೆ. ಅವರ ಮತ್ತೊಂದು ವಿಶೇಷವೆಂದರೆ ಅವುಗಳಲ್ಲಿ ಶ್ರೀ ರಾಘವೇಂದ್ರರನ್ನು, ಶ್ರೀ ಸತ್ಯಬೋಧರನ್ನು ಕುರಿತು ರಚಿಸಿದವುಗಳು ದೀರ್ಘವಾಗಿವೆ. ಇಲ್ಲಿ ಬಂದ ಕೃತಿಯು ಆ ಮಾದರಿಯದು. ಗದ್ಯದೋಪಾದಿಯಲ್ಲಿಯೂ ಅದನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳಬಹುದು. (ಕ್ರ. ೩೭)

ಶ್ರೀ **ಕೇಶವಾಚಾರ್ಯ ಶ್ರೀನಿವಾಸಾಚಾರ್ಯ ಕಟ್ಟಿ** ಅವರು ರಚಿಸಿದ ಕೃತಿಯ ವೈಶಿಷ್ಟ್ಯವೆಂದರೆ ಅದು ದಂಡಕರೂಪದಲ್ಲಿದ್ದು ಹಾಡುವುದಕ್ಕೆ ಅನುಕೂಲವಾಗಿದೆ. ಅದಕ್ಕಾಗಿ ಬೇರೆ ಪ್ರಸಿದ್ಧ ಹಾಡುಗಳ ಧಾಟಿಯನ್ನು ಉಲ್ಲೇಖಿಸಿದ್ದಾರೆ. ಜೊತೆಗೆ ವಚನ, ಎಂದರೆ ಗದ್ಯರೂಪವೂ ಅಲ್ಲಲ್ಲಿ ಕಾಣಿಸಿಕೊಂಡಿದೆ. ಶ್ರೀ ಸತ್ಯಬೋಧರು ಸವಣೂರಿನ ಮುಸಲ್ಮಾನ್ ಪರಿವಾರ ಮಧ್ಯದಲ್ಲಿ ಇದ್ದರಾದ್ದರಿಂದ ಒಂದು ಹಾಡಿನಲ್ಲಿ ಅಲ್ಲಾ, ಮುಲ್ಲಾ, ಹಸನ್, ಅಬ್ಬಾ ಮುಂತಾದ ಶಬ್ದಗಳನ್ನು ಮೋಜಿಗಾಗಿ ತಂದದ್ದಿದೆ. (ಕ್ರ.೩೮)

ಕೊನೆಯದು ದಿ। **ಶಿವರಾವ ಡಬೀರ**ರದು. ಹುಬ್ಬಳ್ಳಿಯಲ್ಲಿ ಸ್ಥಾಯಿಯಾಗಿದ್ದ ಅವರ ಮನೆತನವು ಮೊದಲಿನಿಂದಲೂ ಶ್ರೀಸತ್ಯಬೋಧರ ಶಿಷ್ಯತ್ವ ವಹಿಸಿದ್ದಿತು. ಶಿವರಾಯರು ವೃತ್ತಿಯಲ್ಲಿ ಉದ್ಯಮಿಗಳು. ಆದರೆ ಷಟ್ಪದಿಯಲ್ಲಿ ನಿರರ್ಗಳವಾಗಿ ಕವನಿಸಿದ್ದುದು ಯಾರನ್ನೂ ಅಚ್ಚರಿಗೊಳಿಸುವಂತಹದು.

ಇಲ್ಲಿಯ ೪೦ ಕೀರ್ತನೆಗಳ ವಿಷಯ ಒಂದೇ. ಅದುವೆ ಶ್ರೀಸತ್ಯಬೋಧ ಯತಿವರೇಣ್ಯರ ಮಹಿಮಾ ವರ್ಣನೆ. ಆದರೆ

ಒಬ್ಬೊಬ್ಬರೂ ಹೇಳುವ ರೀತಿ - ಬೇರೆಯಾದದ್ದೇ ಆಗಿದೆ. ಇಷ್ಟಕ್ಕೂ ಗುರುವರ್ಯರನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುವುದು, ನೆನೆಯುವುದು ಶ್ರೇಯಸ್ಕರವೇ ತಾನೇ.

ಇಲ್ಲಿರುವ ಹಾಡುಗಳಿಗೆ ರಾಗ ತಾಳ ಹೇಳಿಲ್ಲವಾದರೂ, ತಮತಮಗೆ ಪರಿಚಿತವಿರುವ ಧಾಟಿಗಳನ್ನು ಅನ್ವಯಿಸಿ, ಹಾಡುವುದಕ್ಕೆ ಯತ್ನ ಮಾಡಿದರೆ ಈ ಸಂಕಲನದ ಉಪಯುಕ್ತತೆ ಹೆಚ್ಚಿದಂತೆ ಆಗುವುದು.

- ಶ್ರೀ.ಹಾ.

# ಶ್ರೀ ಸತ್ಯಬೋಧ

# ಸ್ತುತಿಪರ

# ಹಾಡುಗಳು

## ೩. ಶ್ರೀ ಸತ್ಯಬೋಧ ಸ್ತುತಿಪರ ಹಾಡುಗಳು

೧

**ನುತಿಸಿ ಬೇಡುವೆ ವರವ ಕರವ ಮುಗಿದು**
ಸತತ ಲಕುಮೀಪತಿಯ ಭಕುತಿ ಒಂದೇ ಇರಲಿ ।। ಪ ।।

ಮದನಶರತಿಮಿರಾರ್ಕ ಸ್ವಜನವಾರ್ಧಿಗೆ ಪೂರ್ಣ
ವಿದು ಮಂಗಳಗಾತ್ರ ಬಲು ಸುಲಭ
ಬುಧನಾಗಿ ಶಿಷ್ಯರ್ಗೆ ಸುಧೆಯ ಪೇಳುವ ಮೌನಿ
ಎದುರಿಲ್ಲ ನಿಮಗೆಲ್ಲಿ ಗುರುವೆ ಸುರತರುವೆ ।। ೧ ।।

ಅಂದವಾದಾ ಕಾವ್ಯ ಸಾಮರ್ಥ್ಯಧೀರುವೆ
ಮಂದಹಾಸದಿ ನೋಳ್ಪ ಭಕುತ ಜನರ
ಒಂದೊಂದು ಪದಾರ್ಥ ಪಿಡಿವ ಗಂಟಲ ರಾಹು
ನಂದತೀರ್ಥರಮತಕೆ ಕೇತುಸ್ಥಾನೀಯ ನಿತ್ಯ ।। ೨ ।।

ವಾದಿಗಳೆದೆಯ ಶೂಲ ಸತ್ಯಪ್ರಿಯ ಕರಜಾತ
ಸಾಧುಸಜ್ಜನಗೇಯ ಸತ್ಯಬೋಧ
ಮೋದಿ ಹಯವದನರಾಮ ವಿಜಯವಿಟ್ಠಲ -
ನಾದಿದಿದ್ದೈವವೆಂದು ಎಣಿಸುವ ಜಪಶೀಲಾ ।। ೩ ।।

೨

**ಮಾರಮದ ಘನ ಸಮೀರ ಮಧ್ವಮತೋದ್ಧಾರ,**
**ಶುಭಗುಣಸಾಗರ**

ಧೀರ ಶ್ರೀಸತ್ಯಬೋಧಾರ್ಯ ಗುರು ಕರುಣದಲಿ
ವೈರಿವರ್ಗವ ಗೆಲಿದು ಧಾರುಣೀಯೊಳು ಮೆರೆದೆ ॥ ಪ ॥

ಮುನಿ ನಿಮ್ಮ ಮಹಿಮೆಯನು ತಿಳಿಯದಲೆ ದಂಡೆತ್ತಿ
ಮನಸಿಜನು ಬರಲು ಕೇಳಿ ತಾಳೀ
ಘನ ಮಹಿಮ ಸತ್ಯಪ್ರಿಯ ಮುನಿ ಕರುಣ ದೃಢ ಕವಚವನು
ಧರಿಸಿ ಧೀರನಾಗೀ ಸಾಗೀ
ಮನಜಯಾದ್ಯಷ್ಟಾಂಗ ಯೋಗ ಸಾಧನ ಬಲದಿ ಮಣಿಯದಲೆ
ಮಾರ ಮಲೆತೂ ಕಲೆತೂ
ಪ್ರಣವಾದಿ ಮಂತ್ರ ಪ್ರತಿಪಾದ್ಯ ಮೂರ್ತಿಗಳ ಚಮೂಪನ ಮಾಡಿ
ಅರಿವ್ರಾತ ಹಣಿದು ಓಡಿಸಿದ ಸಮ ॥ ೧ ॥

ಕುಸುಮಾಸ್ತ್ರನಂಗನಾಗಲು ನೋಡಿ ಉಡುಹಿಮವನೆಸಗಿ
ನಭ ಕೈದಿ ನಿಂದಾ ಮಂದಾ
ಶ್ವಸನ ಮೆಲ್ಲನೆ ವನಕೆ ಪೋದ ವಸಂತ ಝುಷ* [ಮೀನು]
ಮಕರಿ ಜಲದೊಳಡಗೀ ನಡುಗೀ
ಎಸೆವ ಶುಕ ಪಿಕ ಸಮೂಹಗಳಂಜಿ ಬಾಯ್ಬಿಡುತ ದಶದಿಶೆಗಳಲ್ಲಿ
ಯಶೋನಿಧಿಯೆ ಕೂಗೀ ಸಾಗೀ ॥ ೨ ॥

ಮಾರನಪಜಯ ಕಂಡು ಕ್ರೋಧಾದಿ ವರ್ಗಗಳು
ದೂರದಲಿ ನಿಂದು ನಮಿಸೀ ಗಮಿಸೀ
ವೀರ ಕರ್ಣನು ತನ್ನ ಮೀರ್ದ ತ್ಯಾಗವ ಕಂಡು
ಸಾರ್ದ ರವಿಮಂಡಲವನೂ ತಾನೂ
ಧೀರ ನಿಮ ಪಾಂಡಿತ್ಯ ಕಂಡು ಶೇಷ ಶಿರ ಬಾಗಿ
ಧಾರುಣಿಯ ಕೆಳಗೆ ನಡೆದಾ ಬಿಡದಾ
ಶ್ರೀರಾಮ ವ್ಯಾಸ ಗೋಪಾಲವಿಠ್ಠಲನಂಘ್ರಿ ಆರಾಧಕರೆ
ನಿಮ್ಮ ಚಾರು ಚರಣಕೆ ನಮಿಪೆ ॥ ೩ ॥

೩

**ಆವನೆದರು ಮೂರ್ಜಗದೊಳು ಲೋಕ**
ಪಾವನ ಗುರು ಸತ್ಯಬೋಧಯತೀಂದ್ರಗಿನ್ನ || ಪ ||

ಬಹು ಸುಂದರ ಸೀತಾರಘುಪತಿ ಪಾದ
ನಳಿನಯುಗ್ಮವ ಪೂಜಿಪ ಯತಿ, ಎಮ-
ಗೊಲಿದು ಪಾಲಿಸುವನು ಸನ್ಮತಿ ಈ
ಜಲಜಭವಾಂಡದೋಳ್ ತುಂಬಿರೆ ಕೀರುತಿ || ೧ ||

ಪೀಳಿಗೆ ರಾಮ ದಿಗ್ವಿಜಯರಾಮ, ಸಿರಿ
ಲೋಲ ವಿಟ್ಠಲ ರಾಮ ವ್ಯಾಸಕೂರುಮ, ಕಮ-
ಲಾಲಯ ದೇವಿಯ ಸಿರಿನಾಮದಿಂದ
ವಾಲಗವೀಯುವ ಗುರುಸಾರ್ವಭೌಮಗೆ || ೨ ||

ಯತಿವರ ಸತ್ಯಪ್ರಿಯರ ಕರ
ಶತಪತ್ರಭವ ಭಕ್ತರಾಧಾರ ಮನ್-
ಮಥನ ಮಾರ್ಗಣ ಗೆದ್ದ ಗಂಭೀರ ರತಿ-
ಪತಿ ಪಿತ ಮೋಹನವಿಟ್ಠಲ ಕಿಂಕರಗೆ ಇನ್[ನ್ನು] || ೩ ||

---

ಶ್ರೀ ಮೋಹನದಾಸರು ಒಂದು ಕೋಲು ಹಾಡನ್ನು ರಚಿಸಿದ್ದು ಶ್ರೀಹರಿಯಿಂದ ಆರಂಭಿಸಿ ಅವರೋಹಣ ಕ್ರಮದಲ್ಲಿ ದೇವ - ಗುರುಗಳನ್ನು ಸ್ತುತಿಸಿದ್ದಾರೆ. ಅವುಗಳಲ್ಲಿ ೫೬ನೆಯದು ಸತ್ಯಬೋಧರನ್ನು ಕುರಿತಿದೆ :

ಸತ್ಯಬೋಧರೆಂಬ ಸದ್ಗುರು ಚರಣವ
ಚಿತ್ತದೊಳಿಟ್ಟು ಚರಿಸುವ ಕೋಲೆ
ಚಿತ್ತದೊಳಿಟ್ಟು ಸ್ಮರಿಸಿ ನಾ ಪೇಳ್ವೆನು
ಚಿತ್ತಜಭವನ ಚರಿತೆಯ ಕೋಲೆ ||

೪

**ನಾ ಧನ್ಯನಾದೆನಿಂದು ಸತ್ಯ-**
**ಬೋಧರಾಯರ ದಿವ್ಯಪಾದ ಕಮಲವ ಕಂಡು** ॥ ಪ ॥

ಹಿಂಗಿದವಖಿಲ ದೋಷಂಗಳು ಈ ಮುನಿ-
ಪುಂಗವರಂಘ್ರಿ ಸಂದರುಶನದಿ
ಗಂಗಾದಿ ತೀರ್ಥ ಭುಜಂಗಾದ್ರಿ ಮೊದಲಾದ
ತುಂಗಯಾತ್ರಾ ಫಲವು ಸಮನೆನಿಸಿತು ॥ ೧ ॥

ದಾವ ಮುನಿಗಳೊ ದಾವ ದೇವತೆಗಳೊ
ದಾವರು ಬಲ್ಲರು ಇವರ ಮಹಿಮೆ
ಸೇವಿಪ ಜನರ ಕೃಪಾವಲೋಕನದಿಂದ
ಪಾವನಮಾಡುವ ಕೋವಿದಾರ್ಯರ ಕಂಡು ॥ ೨ ॥

ಸೀತಾರಮಣ ಜಗನ್ನಾಥವಿಟ್ಠಲರೇಯ
ಭೂತಳದೊಳು ಈ ಮಹಾತ್ಮರನು
ಪ್ರೀತಿಯಿಂದಲಿ ತಾ ಸೃಜಿಸಿದ ಜಗದಿ ಪು-
ನೀತರ ಮಾಡಲು ತಾ ತಕ್ಷಣದಿ ॥ ೩ ॥

೫

**ಪ್ರತಿಗಾಣೆ ನಿಮ್ಮ ಮಹಿಮೆಗೆ ಸತ್ಯಬೋಧ**
ಯತಿಕುಲವರನೆ ನಿತ್ಯ ॥ ಪ ॥

ತುತಿಸಿ ವಂದಿಸುವೆ ತಾವಕರೊಳಗೆಣಿಸೊ ಆ-
ರ್ಥಿಪ ಜನ ಚಿಂತಾಮಣಿ, ಸತ್ಕರುಣೀ ॥ ಅ ಪ ॥

ಶ್ರೀನಿವಾಸನ ಗುಣ ಸಾನುರಾಗದಲಿ ವ್ಯಾ-
ಖ್ಯಾನ ಪೇಳುವ ಕಾಲದಿ
ಶ್ವಾನರೂಪದಿ ಪವಮಾನ ಜನರ ಮುಂದೆ
ಕಾಣಿಸಿಕೊಂಡನಂದು, ತಾ ಬಂದು || ೧ ||

ಬವರಗೋಸುಗ ಬಂದ ಯವನಾಧಿಪತಿ ನಿಮ್ಮ
ಸುವಿಚಿತ್ರ ಮಹಿಮೆ ಕಂಡು
ಪ್ರವಿತತನಾಗಿ ಕಪ್ಪವ ಕೊಟ್ಟು ನಮಿಸಿದ
ಕವಿ ಆಲವಾ ವಿಭವಾ ಸುಭವಾ || ೨ ||

ಇವರು ದೇವಾಂಶರೆಂದರುಪುವಗೋಸುಗ
ದಿವಿಜ ತರಂಗಿಣಿಯು ಶಿವನಂಗ ಭೂರುಹ
ಮೂಲ ಭಾಗದಲ್ಲಿ ಉ-
ದ್ಭವಿಸಿ ಕಂಗೊಳಿಸಿದಳೂ, ಕೃಪಾಳು || ೩ ||

ಸ್ವಾಂತಸ್ಥ ಮುಖ್ಯಪ್ರಾಣಾಂತರಾತ್ಮಕ ಭಗ-
ವಂತನಂಘ್ರಿಕಮಲಾ
ಸಂತತ ಸರ್ವತ್ರ ಚಿಂತಿಸುತಿಪ್ಪ ಮ-
ಹಂತರಿಗೇನಚ್ಚರಾ ವಿಚಾರಾ || ೪ ||

ಮರುತ ಮತಾಬ್ಧಿ ಚಂದಿರ ಚಾರು ಚರಿತ ಭೂ-
ಸುರವರ ಸನ್ನುತನೇ
ಪರಮ ಪರುಷ ಜಗನ್ನಾಥವಿಟ್ಠಲ ನಿಮ್ಮ
ಪರಿಪರಿ ಮಹಿಮೆ ಎಲ್ಲಾ ತಾ ಬಲ್ಲಾ || ೫ ||

೬

**ವಾದಿವಾರಣ ಪಂಚವದನ ಸತ್ಯಬೋಧ**
**ಸದ್ಗುರು ಜಿತಮದನ** ॥ ಪ

ಬಾದರಾಯಣ ರಾಮ ವೈದೇಹಿ ಚರಣಾಬ್ಜಾ-
ರಾಧಕನೆನಿಪ ಸಮೋದವಿತ್ತು ಕಾಯಬೇಕೊ ॥ ಅ ಪ

ಶ್ರೀಮದ್ವವಾರಿಧಿ ಸೋಮ ದ್ವಿಜೋತ್ತಮ ಸದ್ಗುಣ ಗಣಧಾಮ
ಕಾಮಿತಜನಕಲ್ಪ ಭೂಮಿಜ ವಿಬುಧ ಸು-
ಪ್ರೇಮಿ ಸಂಯಮಿ ಕುಲೋದ್ಧಾಮ ದಯಾಂಬುಧೇ
ಗೋಮನಿವಲ್ಲಭನ ಪದಯುಗ
ತಾಮರಸವನು ದಿನದಿ ಬಿಡದಲೆ
ನೇಮದಿಂದಲಿ ಭಜಿಸುತಿಪ್ಪ ಮಹಾಮಹಿಮ ನಿನ್ನ ತುತಿಸ ಬಲ್ಲ
॥ ೧

ದೀನಜನರ ಬಂಧು ನಿನ್ನ ಪಾದ-
ಕಾನಮಿಸುವೆ ಸುಪ್ರಸನ್ನ ದಾನಮಾನಗಳಿಂದ
ಜ್ಞಾನಿ ಜನರ್ಗೆ ಆನಂದಪಡಿಸುತ್ತ ಸಾನುರಾಗದಿ ನಿತ್ಯ
ಶ್ರೀನಿಕೇತನನ ಪರಮ ಕಾರು-
ಣ್ಯಾ ನಿವಾಸಸ್ಥಾನನೆನಿಪ ಮಹಾನುಭಾವ
ಭವತ್ಪದಾಂಭೋಜಾಣುಗರ ಅಣುವೆಂದು ಪಾಲಿಸು ॥ ೨

ಸತ್ಯಪ್ರಿಯರ ಕರಕಮಲಾ
ಜಾತ ನಿತ್ಯ ನಿರ್ಜಿತ ಘೋರಶಮಲಾ
ಚಿತ್ತಜಪಿತ ಜಗನ್ನಾಥವಿಟ್ಠಲನ್ನ
ಚಿತ್ತಾನುವೃತ್ತಿಗಳಂತೆ ಸಂತೈಸುತ್ತಾ
ಅತ್ಯಧಿಕ ಸಂತೋಷದಲಿ ಪ್ರತ್ಯರ್ಥಿಗಳಿಗುತ್ತರಿಸಿ ಮಿಗೆ ಪುರು-
ಷೋತ್ತಮನೆ ಪರನೆಂದು ಡಂಗುರವೆತ್ತಿ ಹೊಯ್ಸಿ ಕೃತಾರ್ಥನೆನಿಸಿದ
॥ ೩

೭

**ಮರೆಯದಿರು ಮರೆಯದಿರು ಮೂಲರಾಮಾ**
ಗುರುಸತ್ಯಬೋಧಾರ್ಯಗೊಲಿದ ರಘುರಾಮಾ ॥ ಪ ॥

ವನವನಂಗಳ ತಿರುಗಿ ಹಣ್ಣು ಹಂಪಲ ಮೆದ್ದು
ದಣುವಾದ ಪಾಡು ನಿನಗರಿವಿಲ್ಲವೆ
ದಿನದಿನದಿ ಚಿತ್ರ ವೈಚಿತ್ರ್ಯದ ಭೋಜ್ಯಗಳನ್ನು
ಕ್ಷಣಕ್ಷಣಕೆ ಕೈಕೊಂಬ ಘನಗರುವದಿಂದೆನ್ನ ॥ ೧ ॥

ನಾರು ವಸ್ತ್ರವನುಟ್ಟು ತಲೆ ಜಡೆಗಟ್ಟಿದ್ದು
ತೋರದ್ಹೋಗಿಹುದೇನೊ ನಿನ್ನ ಮನಕೆ
ಮೇರೆ ಇಲ್ಲದ ಪದಕ ವಜ್ರ ಮಣಿ ಮುಕುಟದಾ
ಭಾರವನು ನೀ ವಹಿಸಿ ಬಹು ಬಿಂಕದಿಂದೆನ್ನ ॥ ೨ ॥

ಹೆಂಡತಿಯ ಕಳಕೊಂಡು ಕಂಡ ಕಂಡರಿಗೆ
ಅಂಡಲೆದ ಮಾತುಗಳ ಅನ್ನಲ್ಯಾಕೆ
ಮಂಡಿತಾಭರಣದಿಂದೆಡದಲ್ಲಿ ಶ್ರೀಸತಿಯ
ಕಂಡು ಸುಖಬಡುವಂಥ ಸೌಭಾಗ್ಯದಿಂದ ॥ ೩ ॥

ಅರ್ಭಕನ ತೆರದಂತೆ ದರ್ಭದ್ಹಾಸಿಗೆ ಮೇಲೆ
ಗುಬ್ಬಿಯಂದದಿ ಮಲಗಿದನು ಮರೆತೆಯಾ
ಲಭ್ಯವಾಗಿಹ ಹೇಮ ತೊಟ್ಟಿಲೊಳು ಮಲಗೀಗ
ಉಬ್ಬಿ ಉತ್ಸಾಹದಿಂ ಪೂಜೆಗೊಳ್ಳುತಲೆನ್ನ ॥ ೪ ॥

ನಮ್ಮ ಗುರುಗಳು ನಿನಗೆ ಈ ಪರಿಯಲುಪಚಾರ
ಘಮ್ಮನೆ ಮಾಡಲು ಘನತೆಯಿಂದಾ
ನಮ್ಮ ಸಾಕದೆ ಇನಿತು ದೂರ ನೋಳ್ಪುದು ನಿನಗೆ
ಧರ್ಮವಲ್ಲವೊ ಸ್ವಾಮಿ ದಯದಿಂದ ನೋಡೆನ್ನ ॥ ೫ ॥

ಈಗಲೀ ಸತ್ಯಬೋಧರ ಬಳಿಯಲಿರಲಾಗಿ
ನೀಗಿ ಹೋಯಿತು ನಿನ್ನ ಪಡಿ ಪಾಟಲು
ಆಗೀಗ ಎನ್ನದಲೆ ಕ್ಷಣಕ್ಷಣಕು ಕೈಕೊಂಬ
ಭೋಗ ಬಡುವದು ಮೊದಲಿಗಿದ್ದಿಲ್ಲವೆಂದೂ ॥ ೬ ॥

ಸಾಕಾರ ರೂಪ ಸರ್ವೋತ್ತಮನೆ ವೈಕುಂಠ
ಬೇಕಾಗಲಿಲ್ಲವೇ ಈ ಭಾಗ್ಯಕೆ
ಯಾಕೆ ತವ ಭಕುತನ ನಿರಾಕರಿಸುವದು ದೇವ
ಶ್ರೀಕಾಂತ ಸಲುಹೆನ್ನ ವ್ಯಾಸವಿಠ್ಠಲರೇಯ ॥ ೭ ॥

೮

**ನಂಬಿದೆ ನಿನ್ನ ಶ್ರೀಗುರುಪೂರ್ಣ**
ಬೆಂಬಿಡದಲೆ ನೀ ಕಾಯಬೇಕೆನ್ನ ॥ ಪ ॥

ಸತ್ಯಪ್ರಿಯರತಿಪ್ರೀತಿ ಕುಮಾರ
ಸತ್ಯ ಸನಾತನೀ ಸತ್ಯಬೋಧ ಗುರು ॥ ೧ ॥

ನಿತ್ಯ ಸತ್ಯವ್ರತ ಭೃತ್ಯಮನೋರಥ
ಅತ್ಯಂತ ಹರುಷದಿ ಇತ್ತ ಸನ್ಮತಿ ಯತಿ ॥ ೨ ॥

ಶ್ರೀದವಿಟ್ಠಲನ ಪಾದ ಮಧುಪ ನಿತ್ಯ
ಸಾಧುವರ್ಯ ಕೃಪಾ ಸಾಗರಾ ಸತತ ॥ ೩ ॥

೯

**ಸತ್ಯಬೋಧರಾಯಾ ಪಾಲಿಸೋ ಭೃತ್ಯಜನರ ಪ್ರಿಯಾ**
ನಿತ್ಯದಲಿ ತುತಿಪೆ ಮನದೊಳು
ಚಿತ್ತಜಪಿತನಲಿ ಉತ್ತಮ ಮತಿ ಕೊಡು || ಪ ||

ಸೂರಿ ಜನರ ವಂದ್ಯ ಈ ಭವವಾರಿಧಿಯೊಳು ನೊಂದೆ
ಆರಾತ ಜನರಿಗೆ ತ್ಥೋರಿಸಿ ಹರಿಯನು
ಕೀರುತಿಯಲಿ ಸುವಾರುತೆ ಪೇಳಿಸೊ || ೧ ||

ಅಪರಾತ್ರಿಯೊಳು ಅನ್ನ ಉಣುವ ವಿಪರೀತವೇನೆಂದು
ಅಪಹಾಸ ಮಾಡಿದವರಿಗಾಕ್ಷಣ
ತಪನ ತೋರಿದಾ ವಿಪರೀತ ಮಹಿಮನೆ || ೨ ||

ಗಂಗೆಗೆ ನೀ ಪೋಗಿ ತಾ ಉತ್ತುಂಗಮನಿರೆ ಯೋಗಿ
ಅಂಗನೆ ತಾನತಿಶಯದಿ ತೆರಳಿ ಬಂದು
ಮಂಗಳಸ್ನಾನವ ಮಾಡಿಸಿದಳು ಅಂದು || ೩ ||

ಸಾರ್ವನಾ ನಿನ್ನ ನೀ ಇನ್ನು ದೂರ ನೋಡದೆ ಎನ್ನ
ಸಾರಿಗರಿದು ಶ್ರೀವೆಂಕಟವಿಟ್ಠಲನ
ಚರಣಗಳ ತೋರು ರಕ್ಷಿಸುತ || ೪ ||

೧೦

**ಭಜಿಸಿ ಬದುಕುವೆನು ಯತಿವರರಾಗಿಹ**
ಗುರು ಸತ್ಯಬೋಧರ ನಿಜಪದಕಮಲವ ॥ ಪ ॥

ತ್ರಿಜಗದೊಡೆಯ ಶಿರಿ ಗಜರಾಜ ವರದನೆ
ಭುಜಗಶಯನ ಹರಿ ಕಾಯೆನುತ
ಅಜಸುರ ವಂದ್ಯನೆ ಭಜಿಸಿ ನಿಶಿಯೊಳು
ಕಂಜಸಖನ ತೋರಿದಾ ಯೋಗಿವರ್ಯರನೀಗ ॥ ೧ ॥

ಸಾಗರಶಯನನೆ ಸರಸಿ ಸದ್ಗುಣ ನಿಗ
ಮಾಗಮಗೋಚರ ನೀನೆನುತ
ಭಾಗೀರಥಿಯಳ ಆಗಮನವ ಕಂಡು ಆಗ
ತೋರಿದ ಯೋಗಿವರ್ಯರನೀಗ ॥ ೨ ॥

ಸೀತಾರಮಣನೆ ವರದಾತನೆ ಪ್ರೀತನೆ ವಾಯುಸುತನ ಪೊರೆ-
ದಾತನೆ ನೀ ಧೊರೆಯೆನ್ನುತಲಿ
ಖ್ಯಾತಿಯೊಳು ವಿಷವಮೃತವ ಮಾಡುತ ಸ್ಮರ
ತಾತನೆ ಸಲಹೆನುತೀತೆರದಿರ್ಪರ ॥ ೩ ॥

ಕಡಲಶಯನ ಶಿರಿ ಉಡುಪಿ ಕೃಷ್ಣನೆನು-
ತಡಿಗಡಿಗನುದಿನ ಧ್ಯಾನಿಸುತ
ಬಡವರಭೀಷ್ಟವ ಕೊಡುವ ಸವಣೂರೊಳು
ದೃಢವಾಗಿ ನೆಲಸಿದ ಜಗವರನನ್ನು ॥ ೪ ॥

೧೧

**ಭಕುತಿ ಪಾಲಿಸೋ ವಿರಕ್ತಿ ಕರುಣಿಸೋ** || ಪ ||
ಸತ್ಯಪ್ರಿಯತೀರ್ಥ ಕರಜ ಸತ್ಯಬೋಧ ಗುರುವರೇಣ್ಯ
|| ಅ ಪ ||

ಪೃಥ್ವಿಜಾವಲ್ಲಭನ ಪಾದ ನಿತ್ಯ ಪೂಜಿಸುತಲಿ ಜಗದಿ
ಮತ್ತಮಾಯಿ ಗಜಕುಲ ಪಂಚವಕ್ತ್ರನೆನಿಸಿ ಮೆರೆದ
ಗುರುವೆ || ೧ ||

ನಂದತೀರ್ಥಮತ ಪಯೋಬ್ಧಿ ಚಂದ್ರ ಸದೃಶರೆನಿಸಿ ಸತತ
ನಂದಶಾಸ್ತ್ರ ಬೋಧಿಸಿ ಬುಧ ವೃಂದಕೆ ಆನಂದಗರೆದ || ೨ ||

ಇರುಳು ಕಾಲದಲ್ಲಿ ನಭದಿ ತರಣಿ ಬಿಂಬ ತೋರಿದಂಥ
ಪರಮ ಮಹಿಮ ನಿಮ್ಮಯ ಶುಭ ಚರಣ ಸ್ಮರಣೆ ಕರುಣಿಸೆನಗೆ
|| ೩ ||

ಕೋನೇರಿಯಾಚಾರ್ಯರು ನಿಮ್ಮ ಕಾಣುತ ತೀರ್ಥವನು ಕೊಂಡು
ವಾನರ ದೇಹವನು ತ್ಯಜಿಸಿ ಸುಸ್ಥಾನಗತಿಯ ಪಡೆದರು ಜವ
|| ೪ ||

ಶರಣ ಜನರ ಪೊರೆವ ಕಾರ್ಪರ ನರಹರಿ ಪದದಿಂದ ಜನಿತ
ಸುರನದಿ ನಿಮ್ಮಯ ಬಳಿಗೆ ಬಂದಿರುವೆ ಮಹಿಮೆ
ತುತಿಸಲೆಂದು || ೫ ||

೧೨

**ನೋಡಿದೇ ಗುರುವರರ ನಾ ನೋಡಿದೇ** || ಪ ||

ನೋಡಿ ಗುರುಗಳ ಪಾದ ಈಡಾಡಿ ಶಿರವನು
ಬೇಡೆ ಭಕ್ತಿಜ್ಞಾನ ನೀಡುತ ಪೊರೆವರ || ಅ ಪ ||

ಹೇಮಕಾಮಿನಿಯನೆ ಜರಿದೂ ಪ್ರಿಯರ
ಪ್ರೇಮದ ಚರಣಗಳ್ಪಿಡಿದೂ ಬಲು
ನೇಮದಲ್ಯತಿಯಾಗಿ ಮೆರೆದೂ ಮಾಯಿ
ಗೋಮಾಯಿಗಳನೆಲ್ಲ ಜರಿದೂ - ಆಹಾ
ರಾಮಚಂದ್ರರ ಪಾದ ತಾಮರಸವ ಧರಿಸಿ
ಭೂಮಿಯೊಳಗೆ ಚರಿಸಿ ಮೆರೆಸಿದ ಗುರುಗಳ || ೧ ||

ಶೇಷರೂಪಿಲಿ ಬಂದ ಹರಿಯಾ - ಗುಪ್ತ
ಭಾಷೆಯ ಕೇಳುತ್ತ ಗೃಹವಾ - ಪೊಕ್ಕು
ಮೀಸಲೆಂದೆನಿಸಿದ ಧನವಾ - ಲೇಸಾ
ಯಾಸಿಲ್ಲದೆ ತೆಗಿಸ್ಯದನಾ - ಆಹಾ
ವಿಸೇಸು ಜನುಮದಿ ಪೋಷಿಸಿರೂವನ
ಶ್ರೀಶಗರ್ಪಿಸುತಲಿ । ತೋಷವ ಪಡಿಸಿದರ || ೨ ||

ಮೋದದಲಿ ಹರಿಪರನೆಂದೂ - ಪೂರ್ಣ
ಬೋಧರೆ ಗತಿ ನಮಗೆಂದೂ - ಮಾಯ
ವಾದಗಳನೆ ಬಿಡಿರೆಂದು - ಸತ್ಯ
ಬೋಧರೆ ಅರುಹುತ ನಿಂದೂ - ಆಹಾ
ವೇದವಿನುತ ಗುರುಗೋವಿಂದವಿಟ್ಠಲನ
ಪಾದಪಿಡಿದು ಸವಣೂರಿನಲಿ ಮೆರೆದವರ || ೩ ||

೧೩

**ಕುರುಡನಿಗೆ ಕರವಿತ್ತು ಕೈಪಿಡಿದು ಕಾಯೋ** || ಪ ||
ದೃಢಮತಿಯಿತ್ತು ತವ ಪಾದದಲಿ || ಅ ಪ ||

ಗರುಡಾರಿಭೂಷಣನ ಚರಣದಡಿಯೊಳಗಿದ್ದು
ಘನತಪವ ಗೈವ ಮಹತ ಪರಿಯೊ || ೧ ||

ಬೋಧತೀರ್ಥಾರ್ಯರ ಮತಕನುಸರಿಸಿ
ಸದ್ಭಕುತ ಜನಕೆ ಭೇದಗಳ ಬೋಧಿಸುತ
ಸತ್ಯಬೋಧಾಖ್ಯಯತಿ ಧರೆಯೊಳಗಮಳವೇ || ೨ ||

ಮ್ಲೇಂಭಪುರದಲಿ ಕುಳಿತು ಸಂಚಿತಾಗಾಮಿಗಳ
ಕೊಂಚಮಾಡುತ ನಿಷ್ಕಂಚಿನರ ಪ್ರೀಯಾ
ತಂದೆವರದಗೋಪಾಲವಿಟ್ಠಲನ
ಮಂಚಪದನಿಂದ ಪೋಷತನಾದ ಪ್ರಭುವೇ || ೩ ||

೧೪

**ನಿಂದಿಸೋರಿಗೆ ನಿಂದೆಯನು ಕೊಡುವಾ**
ಕೊನೆ ಕಾಮರಿಗೆ ಕೊನೆಯನು ಕೊಡುವಾ
ಘನ ಮಹಿಮಾ ನಮ್ಮ ಸತ್ಯಬೋಧಗುರು-
ವನುದಿನ ನೆನೆಯಲಭೀಷ್ಟವ ಕೊಡುವಾ || ಪ ||

ರಾಮದೇವಾರ್ಚನೆ ನೇಮದಿಂದಲಿ ಗೈದು
ಕಾಮಿತ ಫಲಪ್ರದ ಬಲವೈಯಿದ್ದಾ
ಶೀಮಿಶೀಮಿಯೊಳು ಕಾಮನೈಯ್ಯನ ಜನ
ಕಾಮನೆ ಪ್ರದಾನೆಂಬುದೆ ಸಾರಿದಾ
ಧೀಮಾನ್ ಶ್ರೀಮಾನ್ ಕಾಮಿತೇಷ್ಟದಾ
ಕಾಮನೆಂದು ತಾ ಪೊಗಳಿಸಿದಾ
ವಾಮದೇವಗುರು ರಾಮಭಕುತನೆಂದು
ಭೂಮಿಯೊಳ್ದಂಗುರ ಹೊಡ್ಸುವಾ || ೧ ||

ತತ್ವ ತಿಳಿದು ನೋಡಿ ಸತ್ಯಾಸತ್ಯ ಹರಿ
ಮತ್ತವನಿಗೆ ಭೃತ್ಯವಾದ ಸೂನು
ಉತ್ತಮರೆಲ್ಲರು ಸತ್ಯಮಯವಂತೆ
ಸತ್ಯಪ್ರಮಾಣವ ಪೇಳಿದನು
ಸತ್ಯಬೋಧ ರವಿ ಮಿಥ್ಯಾಗತ್ತಲೆಗೆ ತಾ
ಕತ್ತರಿಯೆಂದಗುಹಿದನು ಸತ್ಯಬೋಧನೆಯನು
ಸತ್ವರಿಂಗೆ ಮಾಡಿ ಮತ್ತವರುದ್ಧಾರ ಮಾಡಿದನು || ೨ ||

ವರಸದ್ಗುಣಗಣ ನಿಲಯನೆನಿಸಿ ತಾ
ವರ ಶಿಷ್ಯಾನ್ವಿತ ಮೇಣ್ ವಂದ್ಯನಾದ
ಶಿರವರ ಪಾದಾನುಗ್ರಹ ಪಡೆದು ತಾ
ಹರಿಜನಾರ್ತಿತಯ ಭೇದಿಸಿದಾ
ದುರಿತ ತಮರಾಶಿಗಗ್ನಿಯೆನಿಸಿದಾ
ಶರಣರ ಸಂಘ ಬೂದಿಗೈದಾ
ನರಸಿಂಹವಿಟ್ಠಲನ ಕರುಣವ ಪಡೆದು ತಾ
ಗುರುವರ ವರಪ್ರದನೆನಿಸಿದಾ || ೩ ||

೧೫

**ಬೋಧರ ನೋಡಿರೈ ಸತ್ಯಬೋಧರ ಪಾಡಿರೈ** || ಪ ||
ಮೇದಿನಿಯೊಳು ಬುಧಜನ ಉಡುವೃಂದಕೆ
ಚಂದ್ರಾ ಸದ್ಗುಣ ಸಾಂದ್ರಾ || ಅ ಪ ||

ತಾಮಸರಂಧಂತಮದಿಯಟ್ಟಿದಾ ಜವನೋಧರ್ಮ ಪ್ರಸ್ರವನೋ
ಕಾಮನೈಯ್ಯನ ಗುಣ ಪಾರಾಯಣರತ ಧ್ರುವನೊ ಯತಿ ಪುಂಗವನೊ
ರಾಮಾರ್ಚನ ಕೃತ ಪೂತಹಸ್ತ ಪಲ್ಲವನೊ ವಿದ್ವದ್ವವನೋ
ಕಾಮಿತೇಷ್ಟಪ್ರದ ಚಿಂತಾಮಣಿಗುಣಯುತನೋ
ಜನಸನ್ನುತನೊ || ೧||

ಯತಿಮಣಿಮಾಲೆಯೊಳತಿ ಮಿನುಗುವ ಪಚ್ಚದ್ಯುತಿಯೋ ಸಜ್ಜನ
ಗತಿಯೋ ಶ್ರುತಿತ್ತತಿನುತ ಶ್ರೀಪತಿಗುಣ ಸುಧಾ ಸಧೃತಿಯೋ
ಕುರೂಪ
ಹತಿಯೋ ಯತಿಕುಲರತ್ನಾಕರ ಸಂಜನೀತ ಪ್ರೋನ್ನತಿಯೋ ಕವಿಜನ
ನುತಿಯೋ ಮಿತಿಮೀ ಕೂಡಿಹ ಭಗವದ್ಭಕ್ತರ ಹಿತವೊ
ಹರಿಸಮ್ಮತವೋ || ೨ ||

ನಿರುಪಮ ಸುಖತೀರ್ಥವಂಶದಲ್ಲಿ ವರ್ಧನವೋ ಹರಿಜನ ಧನವೋ
ಶರಣರ ದುರಿತಗಳಿರದೆ ಕಳೆವ ಹಿತ ತನುವೋ ಅಭಯ
ಸುಮನವೋ
ಸರುವ ರಾತಿಯೊಳು ರವಿಯು ತೋರ್ದ ತಪಧನವೋ
ಮದಮರ್ದನವೋ
ನಿರುತದಿ ನರಸಿಂಹವಿಟ್ಠಲನ ನೆನೆಯುವ ಯಶವೋ
ದಾಸರ ವಶವೋ || ೩ ||

೧೭

**ಸತ್ಯಬೋಧ ಸದ್ಗುರು ವರ ಪಾಲಿಸು ಭೃತ್ಯನೆಂದು ಎನ್ನ**
ಚಿತ್ತಜನಮನ ತೆತ್ತಿಗರೊಳು ದಾಸೋತ್ತಮ ಸಂಪನ್ನ ॥ ಪ ॥

ಅರುಣೋದಯದಲ್ಲೆದ್ದು ಶ್ರೀಹರಿಯ ಸ್ಮರಣೆಯನುಮಾಡಿ
ಗುರುಪಾದುಕ ಪೂಜಿಸಿ ಮಂತ್ರಾಕ್ಷತೆ ಶರಣರಿಗೇ ನೀಡೀ
ತೆರಳಿ ಬಂದು ಘಟಕಾರ ಭಾವಿಯೊಳು ಸ್ನಾನಾನ್ಹೀಕ ಮಾಡಿ
ವರ ಆಸನದಲ್ಲಿರುತಿರಲು ಭೂಸರರಿಂದೊಡಗೂಡಿ ಕೃಪೆಮಾಡಿ
॥ ೧ ॥

ಮನದಲಿ ಜನ್ಹುಮುನಿಯ ಸುತೆ ಸ್ನಾನವ ಮಾಡಬೇಕೆನುತಾ
ಮನಸಿಗೆ ಮರುತೌದಂಬರ ವೃಷದಿ, ಜನಿಸಿ ಗಂಗಾ ತಾ ಬರುತಾ
ಜನರೆಲ್ಲ ಪಾವನವಾಗಲು ಶ್ರಿಮುನಿಯು ಮೊದಲು ಮೀಯುತಾ
ಅನುಭವವಿಂದಿಗೂ ಭಾಗೀರಥಿ ಪ್ರತ್ಯಕ್ಷ ಸ್ಥಾತ ವಿಷ್ಣುತೀರ್ಥಾ
ಕೃತಾರ್ಥಾ ॥ ೨ ॥

ಸ್ನಾನ ಮಾಡಿ ಆಸ್ಥಾನಕೆ ಬಂದು ವ್ಯಾಖ್ಯಾನವ ಹೇಳುತಲೀ
ಭಾನುಕುಲೇಶ ವ್ಯಾಸ ಸೀತಾಪತೆ ಸಾನುರಾಗದಲ್ಲಿ
ನಾನಾವಿಧ ರಸಸುಭಕ್ಷ್ಯ ಭೋಜ್ಯಂಗಳ ನಿತ್ಯ ಅರ್ಪಿಸುತಲಿ
ಜ್ಞಾನಿಗಳೊಡನೆ ಭೋಜನಗೈಯ್ವ ಸಂಭ್ರಮ ಏನು ವರ್ಣಿಸಲಿ
ಶಬ್ದದಲಿ ॥ ೩ ॥

ದುರುಳರ ಬೋಧನೆಯಿಂದಾ ಗರಳ ಚೂರ್ಣ ತಂದು
ಪರಮಾನ್ನದಿ ಹಾಕಿರಲು ನೈವೇದ್ಯವ ಹರಿಗರ್ಪಿಸಿ ಅಂದು
ಸರ್ವಜ್ಞರು ನೀವೆ ತಿಳಿದು ಶ್ರೀರಾಮನ ಕೊರಳ ಕಪ್ಪು ಕಂಡು
ಉರುತರ ವಿಷ ಹರ ದ್ವಾದಶ ಸ್ತೋತ್ರವ ಪಠಿಸಿ ಘೂರ್ಣವಂದೂ
ಮನನೊಂದು ॥ ೪ ॥

ಅರರೆ ಪಾಚಕ ಸತ್ಯ ಪೇಳೆಂದು ಗದ್ದರಿಸೆ ಶಿರವ ಬಾಗಿ
ಪರಮ ಪಾತಕಿ ಪೇಳ್ದ ನಿಜವನು ಗರಳ ಬೆರೆಸಿದುದು ಸತ್ಯಯೋಗಿ
ಅರಿತ ಕ್ಷಮಿಸ್ಯಾ ನೈವೇದ್ಯ ಭುಂಜಿಸಲು ಶರೀರ ಬಾಧಿತವಾಗಿ
ಇರಳು ಹಗಲು ಮಾಡಿದೆ ಸುಖವಹುದೆಂದರುಹೆ
ವೈದ್ಯರು ಸಾಗೀ ಸಮನಾಗೀ ॥ ೫ ॥

ಸಿತಿಭೋಜನವೆಂದಸುರರು ನುಡಿಯಲು ಹಸನಾಗಿ ತಿಳಿಯೇ
ಅಸಮ ಮಹಿಮೆ ತೋರಿಸೆ ಚಂದ್ರಿಕೆ ಬಿಸಲಂತೆ ಪೊಳೆಯೇ
ವಸುಧಿ ಪಾಲಕ ಜನರೆಲ್ಲಾ ನೋಡಲು ಶಶಿ ಭಾಸ್ಕರ ನಿಲಯ
ಬೆಸಗೊಂಡೆಲ್ಲರು ವಶವಾದರು ಮಾನಸದ ತಾಮಸ ಕಳೆಯೇ
ಭ್ರಮವಳಿಯೇ ॥ ೬ ॥

ಸತ್ಯಪ್ರೀಯರ ಸುತ ಸತ್ತಿಗೆ ಮುತ್ತಿನಂದೋಲದಲ್ಲಿ
ಜತ್ತಾಗಿ ಕುಳಿತು ನೌಬತ್ತು ಕರಿಯ ಮೇಲಿತ್ತು ಹೊಯ್ಯುತಲಿ
ತುತ್ತೂರಿ ಮೊದಲರವತ್ತು ವಾದ್ಯಗಳ ಎತ್ತಿ ಬಾರಿಸುತಲ್ಲಿ
ಮಿಥ್ಯವಾದಿಗಳನೆತ್ತಿ ತಗ್ಗಿಸಿ ಮೆರೆವುತ್ತ ಬಂದಿರಲ್ಲಿ
ವೈಭವದಲ್ಲಿ ॥ ೭ ॥

ಈ ಪರಿ ಯಾವುದ್ದೇಶದಿ ಮಹಿಮಾ ವ್ಯಾಪಿಸಿ ಇರುತಿರಲು
ಶಾಪಾನುಗ್ರಹ ಶಕ್ತರು ಎಂದಾ ಆಪತ್ತಿಗರು ಬರಲು
ಪಾಪಿಗಳೆಲ್ಲರು ನಿಲ್ಲದೆ ಎದುರಿಗೆ ಗೌಪ್ಯದೊಳೋಡುತ್ತಿರಲು
ಕೋಪ ಮಾಡದಲೆ ಶರಣರ ಪೊರೆವದು ಸಂತಾಪ
ಕಳೆಯುತಿರಲು ಹಗಲಿರುಳು ॥ ೮ ॥

ಘನಚರಿತೆಗಳ ದಿನದಿನ ತೋರುತ ಸವಣೂರ ಪುರದೊಳಗೆ
ಚಿನುಮಯ ತಾರೆ ಶೋಭನ ಸಂವತ್ಸರ ವದಿ ಫಾಲ್ಗುಣದೊಳಗೆ
ಜನರಿಗೆ ತೋರಲು ಪ್ರತಿಪದೆ ಎಂಬ ಅಭಿನವ
ಶುಭಮುಹೂರ್ತದೊಳಗೆ
ದಿನಕರನಂತೆ ತನುಪಿಟ್ಟರು ವೃಂದಾವನದೊಳಗೆ ಯಶ
ಬೆಳಗೆ ॥ ೯ ॥

ಪ್ರತಿದಿನಗೊಳ್ಳುವ ಪೂಜಾಸೋಪಸ್ಕಾರ ತುತಿಸಲು ಅಳವಲ್ಲ
ನುತಿಪರಿಗೆ ಕಲ್ಪದ್ರುಮದಂತೆ ಕೊಡುವರು ಅತುಳ ಸಂಪದವೆಲ್ಲಾ
ಮಿತಿ ಇಲ್ಲದೆ ಪ್ರತಿವರುಷ ವಿಪ್ರಸಂತತಿ ಭೋಜನ ಸೊಲ್ಲಾ
ಅತಿಶಯ ಕೇಳ್ವುದುದ್ವಯಾ ನೀತಿಯಾ ಸಂವತ್ಸರ ಸಟಿಯಲ್ಲಾ
ಹರಿ ಬಲ್ಲಾ ॥ ೧೦ ॥

ಕಲಕೃತ ಕಲ್ಮಷ ಬಹುದೂರ ಶ್ರೀತುಳಸಿ ನಳಿನಾಕ್ಷಸುಹಾರಾ
ಗಳದಲಿ ಧರಿಸಿದ ಅವಲಬೋಧರ ಮತ ಜಲಧಿ ಸದಾ
ಸುಲಭದಿ ನರಸಿಂಹವಿಟ್ಠಲನನುಗ್ರಹವ ನೆಲಸಿದ ಗಂಭೀರಾ
ಹಲವು ಮಾತೇನು ನಿಮ್ಮವನೆಂದೆನ್ನನು ಮಾಡೋ ಉದ್ಧಾರಾ
ಗುರುವರಾ ॥ ೧೧ ॥

## ೧೭

ಸತ್ಯಬೋಧರು ಭಕ್ತರ ಪ್ರೀಯರು ॥ ಪ ॥

ಅಪಾರಮಹಿಮರು ತಾಪ ಬಡುವ ಜನರ
ಕೋಪವಿಲ್ಲದೆ ಕಾಪಾಡುವರು ॥ ೧ ॥

ರಾಗಾದಿಂದನುಪಮ ಭಾಗೀರಥಿಯ ಕಂಡು
ಆಗಮವ ತೋರಿದ ಯೋಗಿವರ್ಯರ ॥ ೨ ॥

ಸವಣೂರಾಪುರದಲಿ ಹರಿಯ ಭಕ್ತರನ್ನು
ಪರಿಪಾಲಿಸುವ ಭೀಮೇಶಕೃಷ್ಣನ ಪ್ರೀಯರು ॥ ೩ ॥

## ೧೮

ಏಳಯ್ಯ ಗುರುವರೇಣ್ಯ ಏಳಯ್ಯ ಬೆಳಗಾಯಿತು ॥ ಪ ॥

ಏಳು ಶ್ರೀಗುರುವರ್ಯ ಶ್ರೀಸತ್ಯಬೋಧಾರ್ಯ
ಏಳು ಮಾಯಾತಮವ ಖಂಡಿಸುವ ಖರ ಸೂರ್ಯ
ಏಳು ಪಾಪಾಟವಿಗೆ ಕಾಲಾಗ್ನಿಚರ್ಯ
ಏಳಯ್ಯ ಯೋಗಿ ಗೇಯಾ ॥ ೧ ॥

ಆತುರದ ದರುಶನಕೆ ಕಾದಿದ್ದ ಭೂಸುರರ
ವ್ರಾತಕ್ಕೆ ನಿನ್ನ ಪದ ಪ್ರೀತಿಯಿಂದಲಿ ತೋರಿ
ಸಂತೋಷಗೊಳಿಸಲು ಬೇಕು
ನಾಥನೇ ಬೇಗನೇಳಯ್ಯ ॥ ೨ ॥

ಹಾತೊರೆದು ದೇವ ದರುಶನಕ್ಕಾಗಿ ಸ್ವರ್ಗದಿಂ-
ದೈತಂದ ಸುರಗಣಕೆ - ಮೂಲರಾಮನ ದಿವ್ಯ
ಮೂರ್ತಿಯ ತೋರ್ದವರ ಪ್ರೀತಿಯ ವಿಶೇಷಕ್ಕೆ
ಪಾತ್ರ ನೀನಾಗಬೇಕು ಏಳಯ್ಯ ಗುರುವರೇಣ್ಯ ॥ ೩ ॥

ಪಶುಬುದ್ಧಿ ಖಲರು ಪಾಯಸದಿ ಮಿಶ್ರಿಸಿದಂಥ
ವಿಷದ ದೋಷವನು ದ್ವಾದಶಸ್ತೋತ್ರ ಪಠಣದಿಂ
ಪುಸಿಗೊಳಿಸಿ ಸಂತಸದಿ ಜೀರ್ಣಿಸಿದ
ಯೋಗಿವರ್ಯ ಏಳಯ್ಯ ಗುರುವರೇಣ್ಯ ॥ ೪ ॥

ನಿಶೆಯಲ್ಲಿ ಶ್ರೀರಾಮಚಂದನನು ಪೂಜಿಸಿ
ಬಿಸಿಲನ್ನು ಅರ್ಧರಾತ್ರಿಲಿ ತೋರ್ದ ಮಹಾಮಹಿಮ
ವಸುಧಿಯೋಳ್ ಮೆರೆಯಬೇಕು
ಏಳಯ್ಯ ಗುರುವರೇಣ್ಯ ॥ ೫ ॥

೧೯

ವಂದಿಪೆ ಗುಣಸಾಂದ್ರರಾ ನಾನು
ವಂದಿಪೆ ವರಗುಣ ಸಾಂದ್ರರಾ ॥ ಪ ॥

ವಂದಿಪೆ ವರಗುಣ ಸಾಂದ್ರಶಿಖಾಮಣಿ
ಸುಂದರ ಗುರು ಸತ್ಯಬೋಧರಾ ॥ ಅ ಪ ॥

ಜಪತಪ ವಾಖ್ಯಾನ ಅಪರಿಮಿತಜ್ಞಾನ
ತಪೋನಿಧಿ ಗುರು ಸತ್ಯಬೋಧರಾ ॥ ೧ ॥

ಅದ್ವೈತಶಾಸ್ತ್ರದ ಸದ್ದಡಗಿಸಿದಂಥಾ
ಮಧ್ವರಾಯರ ಮುಖ್ಯಶಿಷ್ಯರಾ ॥ ೨ ॥

ಕಾಮಿತಫಲವೀವ ಸ್ವಾಮಿ ಶ್ರೀರಘುಪತಿಯ
ಪ್ರೇಮಸಿ ಭಜಿಸುವ ಗುರುಗಳ ॥ ೩ ॥

೨೦

ಶ್ರೀ ಸತ್ಯಬೋಧ ಸದ್ಗುರುವರನ ಮಹಿಮೆ
ಸ್ಮರಿಸುವ ನರನೇವೆ ಧನ್ಯ
ಮರುತನಯ್ಯನಂಘ್ರಿ ಸ್ಥಿರವಾಗಿ ಕಾಣುವ
ಸಟೆಯಲ್ಲವೀ ನುಡಿ ಮಾನ್ಯಾ ॥ ಪ ॥

ಧರೆಯಲಿ ರಾಯಚೂರ ಹರಿಯಾಚಾರ್ಯರ ಪತ್ನಿ
ಅರಳಮ್ಮನವರು ತಾವಂದು ಪರಿಪರಿ ವ್ರತದಿಂದ ನರಹರಿ ಸೇವೆಯ
ಕರಿಸಿದರು ವತ್ಸರೊಂದು ಪರಿಪೂರ್ಣ ಫಲಕೊಟ್ಟನೆಂದು
ಸಂಭ್ರಮದಿಂದಿರೆ

ವರಪುತ್ರ ಜನಿಸಿದನಂದು ಚರಿಸಿ ಯತಿಯಾಗಿ ನೀವ್
ಸ್ವರಣಪುರದೊಳು ಪೊರೆಯುತ್ತ ಭಕುತರ ನಿಂದು
|| ೧ ||

ಪರಮ ಪಾತಕಿ ಪಾಚಕ ಪಾಕದೊಳು ತಾನು
ಗರಳ ಮಿಶ್ರವ ಮಾಡಿರಲು
ಹರಿಗೆ ನೈವೇದ್ಯ ಕೊಡಲಾಗಿ ತಿಳಿಯೆ ಮೂರುತಿಯ ಕಂಠವು
ಕಪ್ಪಾಗಿರಲು
ಕರೆದು ಕೇಳಿ ಗರಲ ಸತ್ಯವೆನ್ನುತ ಉದ್ಧರಿಸೆಂದು ಚರಣಕೆರಗಲು
ಹರಿಗರ್ಪಿಸಿರುವ ಕಾರಣದಿ ನೈವೇದ್ಯವ ಹರುಷದಿ
ತಾವೆ ಭುಂಜಿಸಲು || ೨ ||

ವಿಷದ ನಿಮಿತ್ಯದಿ ನಿಶಿ ಭುಂಜಿಸುತಿರಲು ವಿಷಮ ಜನರು
ನಿಂದಿಸಿದರು
ಶಶಿಯನ್ನು ಬಿಸಜಸದಿನಂತೆ ತೋರಿಸೆ ವಶರಾಗಿ ವಂದಿಸಲ್ಯವರು
ಅಸಮ ಮಹಿಮೆಗಳ ಅತಿಶಯ ತೋರಿಸಿ ಯಶಸು
ಜಗದಿ ತುಂಬಿಸಿದರು
ಕುಸುಮನಾಭನ ದಯದಿ ವೃಂದಾವನದಿ ಪ್ರಕಾಶಿಸುತ
ವೈಭವದಿ ಮೆರೆದರು || ೩ ||

ವೃಂದಾವನದಿ ಪೂರ್ಣಚಂದ್ರನಂತಿರೆ ಭಕ್ತವೃಂದಕ್ಕೆ ಅಭಿವೃದ್ಧಿ
ಕೊಡುತಾ
ವಂದೆ ಮನದಿ ಅಭೀಷ್ಟೆಯ ನೀಡುತಲೆ ಸತ್ಯಸಂಧನಾಗಿಹ
ಸುಪ್ರಖ್ಯಾತಾ
ಮಂದ ನಾನು ನಿನ್ನ ಬಂಧುರ ಮಹಿಮೆಯ ಸಂದೋಹ
ತಿಳಿಯಲಶಕ್ತಾ
ತಂದೆ ರಮಾಪತಿವಿಟ್ಠಲ ಸೇವಕನೇ ಮಾರ್ಕಾಂಡೇಯ
ಮರುದಂಶಖ್ಯಾತಾ || ೪ ||

೨೧

**ವೃಂದಾವನ ನೋಡಿರೋ ಶ್ರೀಸತ್ಯಬೋಧರ**
ವೃಂದಾವನ ನೋಡಿರೋ
ವೃಂದಾವನ ನೋಡಿ ಆನಂದ ಮದವೇರಿ
ಬಂದ ದುರಿತ ಅಘವೃಂದ ಕಳೆವ
ಗುರು ವೃಂದಾವನ ನೋಡಿರೋ ॥ ಪ ॥

ಶುದ್ಧ ಶಿಲೆಯ ಮಧ್ಯದಿ ಗುರು ತಿದ್ದಿ ನಾಮವ ಧರಿಸಿ
ಮಧ್ವಮತವ ಅಭಿವೃದ್ಧಿಗೊಳಿಸುತ್ತ
ಶುದ್ಧ ಮೂರುತಿ ರಾಮಚಂದ್ರನ್ನ ಸ್ಮರಿಸುವವರ ॥ ೧ ॥

ಸತ್ಯಸಂಧರ ನೋಡಿರೋ ಅಲ್ಲೇ ಶ್ರೀಸತ್ಯಧರ್ಮರ ನೋಡಿರೋ
ಸತ್ಯಸಂಧರಿಗೆ ಸತ್ಯಧರ್ಮರಿಗೆ
ನಿತ್ಯಬೋಧಪ ಗುರು ಸತ್ಯಬೋಧಾರ್ಯರ ॥ ೨ ॥

ದಾಸಜನರ ಪೊರವ ಮನದ ಅಭಿಲಾಶೆಯ ಪೂರೈಸುತ
ಸೋಸಿಲೆ ಸವಣೂರ ಪುರದೊಳು ವಾಸಿಪ
ವ್ಯಾಸವಿಠ್ಠಲ ಶ್ರೀಸತ್ಯಬೋಧಾರ್ಯರ ॥ ೩ ॥

೨೨

**ಸವಣೂರ ಪುರವಾಸ ತವ ಚರಣ ಭಜಿಸುವೆವು**
ತವಕದಿಂ ಸಂಸಾರ ಭವಣೆ ಬಿಡಿಸುವದೈ ॥ ಪ ॥

ಧರೆಯೊಳಗಜೇಯವಾಗಿಹ ಮೃತ್ಯುವನು ಗೆಲಿದು
ಕುರುಹು ಮಾರ್ಕಾಂಡೇಯರೆಂಬುದ ತೋರಿ

ಗುರು ಸತ್ಯಬೋಧಾರ್ಯರೆಂಬ ನಾಮದಿ ಮೆರೆದ
ಪರಮ ಕರುಣಾಳು ನಿನ್ನಯ ಚರಣ ಭಜಿಪೆನ್ನೆ ॥ ೧ ॥

ಕಾಶಿಯಾತ್ರೆಯ ಮಾಡುವಾಯಾಸವನು ಬಿಡಿಸ-
ಲೋಸುಗವೇ ಭಾಗೀರಥಿಯ ಬರಿಸಿದೆ
ಕಾಸು ಖರ್ಚಿಲ್ಲದೆ ವಿಷ್ಣುತೀರ್ಥದಿ ನಿನ್ನ
ದಾಸರೆಲ್ಲರು ಸ್ನಾನ ಮಾಡಿ ಹರ್ಷಿಪರೈ ॥ ೨ ॥

ಗರಳವನು ಭುಂಜಿಸಿದ ನೆವದಿಂದ ನೀ ಬರಿದೆ
ಇರುಳು ಹಗಲನು ಮಾಡಿ ದ್ವಿಜಗೆ ತೋರಿಸಿದೆ
ಹರಿಯೇ ಸರ್ವೋತ್ತಮನು ಎಂದು ಸಾರಿದ ನಿನ್ನ
ಹರಿದಾಸ ಸರ್ವೋತ್ತಮನು ನುತಿಸುತಿಹನು ॥ ೩ ॥

೨೩

**ಗುರು ಸತ್ಯಬೋಧರ ಚರಣಗಳಿಗಾನಮಿಪೆ**
ನಿರುತ ಸನ್ಮಂಗಲವ ಕರುಣಿಸಲಿ ಎಮಗೆಂದು ॥ ಪ ॥

ಗುರು ಅನುಗ್ರಹವು ಭವ ದುರಿತಹರ ಸುಖವು
ಗುರು ಸ್ಮರಣೆ ಸದ್ಗತಿಗೆ ಉರುತರದ ಸಾಧನವು
ಗುರುಸೇವೆ ಗೈಯ್ಯೆ ಸರುವೇಷ್ಟಾರ್ಥ ಸಿದ್ಧಪವು
ಗುರು ಒಲಿಯೆ ಹರಿಯೊಲಿವ ಸುರರೆ ಸಾಕ್ಷಿದಕೆ ॥ ೧ ॥

ಗುರು ಕಾಯುವ ಸಮಕ್ಷ ಹರಿ ತೋರನು ಪ್ರತ್ಯಕ್ಷ
ಗುರು ದಯವು ಇಹದಲಿ, ಹರಿ ಕೃಪಾ ಪರದಲಿ
ಗುರು ರುಷ್ಟನಾಗಲು ಹರಿ ನೋಡ ಕಣ್ತೆರೆ
ಹರಿ ರುಷ್ಟನಾದರೂ ಗುರು ಕರವ ಪಿಡಿವದಕೆ ॥ ೨ ॥

ಹರ ಮೊದಲು ಸುರರೆಲ್ಲ ಗುರು ಮುಖ್ಯ ಪ್ರಾಣರನು
ನೆರೆದು ಸೇವಿಸಿ ತಮ್ಮ ಪದಗಳ
ಧರಿಸಿ ಜೋವರೊಳಿದ್ದು ನಿರುತ ತಮ ತತ್ವಕ್ರಿಯ
ಸರಿಗ್ಗೆಯೆ ಹರಿಯ ದಯ ದೊರಕಿ ಗತಿಗಾಣ್ಬದಕೆ || ೩ ||

ಗುರು ನಾರದರ ದಯದಿ ಹರಿಯ ಹಿರಿ ಭಕುತರು
ವರ ಧ್ರುವ ಪ್ರಹ್ಲಾದ ಪುಣ್ಯ ಧರೆಯಾಣ್ಮರು
ಪರಮೋಚ್ಚ ಪದವೈದಿದರದಕೆ ಭೂಸುರರೆಲ್ಲ
ವರುಷ ಫಾಲ್ಗುಣ ವದ್ಯ ಸುರುವಿಗೆ ಬರಲು ಸೇವೆಗೆ || ೪ ||

ಸುಮನ ಗಂಗೆಯ ತರಿಸಿ ಅಮಿತ ವಿಷ ಭುಂಜಿಸಿ
ಉಮಾವರನ ಸತ್ಕರಿಸಿ ವೃಷ್ಟಿಗೈಸಿ
ಸಮರಾತ್ರಿ ದಿವಗಳಲಿ ಕ್ರಮದಿ ಶಿರಿವಿಟ್ಠಲನ ಹೃ-
ತ್ಕಮಲದೀಕ್ಷಿಸುವ ಸದಗಮಿಸಿದರು ಸ್ವಸ್ಥಳಕೆ || ೫ ||

## ೨೪

**ಮಂಗಳ ಗುರು ಸತ್ಯಬೋಧಗೆ, ನರ**
ಸಿಂಗನ ವರಜಾತ ಕುವರನಿಗೆ ಜಯ || ಪ ||

ಹರಿಯಾಚಾರ್ಯರು ಪೀತಾಂಬಿಕಾ* ಮಾತೆ ಕುವರಗೆ
ಸ್ಥಿರ ಜ್ಞಾನ ಭಕುತಿ ವಿರಕ್ತನಿಗೆ
ಸುರರಂತೆ ಚರಿತೆ ತೋರಿದ ಪುಣ್ಯ ಪುರುಷಗೆ
ಗುರು ಸುಖತೀರ್ಥರ ಮತೋದ್ಧಾರಗೆ ಜಯ || ೧ ||

* ಅರಳಮ್ಮ

ಕಾಶಿ ರಾಮೇಶ್ವರ ಯಾತ್ರೆಗಧಿಕ ಪುಣ್ಯ
ಈ ಸ್ವಾಮಿ ಪಾದ ದರ್ಶನದ ಫಲ
ಭೂಸುರ ಜನುಮ ಸಾರ್ಥಕ ವಾಗ್ಗದಿವರ ಸಂ-
ತೋಷದಿ ಭಜಿಸೆ, ಭಕ್ತರಾಭೀಷ್ಟೆಗೆ ಜಯ || ೨ ||

ಎರಡಿಪ್ಪತ್ತು ವರುಷ ಸುರಗುರುಗಳ ಪೀಠ
ಉರು ವೈಭೋಗದಿ ಆಳಿ ಶತ ಷಷ್ಟಾಬ್ಧಿ
ವರ ವೃಂದಾವನದಿದ್ದು ಸ್ಥಿರ ಆರಾಧನೆಗೊಂಬ
ಧೊರೆ ಶಿರಿವಿಟ್ಠಲನ ಪುರವಾಸಗೆ ಜಯ || ೩ ||

## ೨೪(ಅ)

**ಸತ್ಯಪ್ರೀಯರ ಪುತ್ರ ಸ್ತುತ್ಯ ಚಾರಿತ್ರ**
ಸತ್ಯಬೋಧ ಪವಿತ್ರ ಭೃತ್ಯರ ಸುಕ್ಷೇತ್ರ || ಪ ||

ಕಪಿವರ್ಯ ನೀವೆಂದು ಯವನ ರಾಜನು ಬಂದು
ಸ್ತವರ ಗೈಯಲು ನಿಂದು, ಸವನಪುರದಿ
ತವ ಮಹಿಮೆ ಮರೆಸುತಲಿ ಭುವನಬುಧ ಮೇಳದಲಿ
ಲಿಪಿನಾಶಿತ ಸುಕೀರ್ತಿ ಯತಿಚಕ್ರವರ್ತಿ || ೧ ||

ಖಂಡೇರಾಯ ದಿವಾನ ಮಂಡೆ ಬಾಗಿದ ನಿಮ್ಮ
ಖಂಡವೈರಾಗ್ಯ ಭಕ್ತಿಸುಜ್ಞಾನಕೆ
ಪಂಡಿತ ಪಾಮರರು ನಿಮ ಕಂಡು ಉದ್ಧತರಾಗಿ
ದಿಂಡುಗೆಡೆವರು ತಮ್ಮ ಹಿಂಡು ಪಾಪಗಳ || ೨ ||

ಭಾಗೀರಥಿಯು ನಿಮ್ಮ ಆಗಮನ ಶ್ರಮ ಉಳುಹೆ
ಸಾಗಿ ಬಂದಳು ತಾನೇ ಸ್ವರ್ಗದಿಂದ
ಯೋಗಿವರನಿಗೊಲಿದು ಭಾಗವತರಘವಳಿಯೇ
ಈಗು ನೆಲೆಸಿಹಳು ಚನ್ನಾಗಿ ಪಿಪ್ಪಲೀರ್ಥೆನಿಸಿ || ೩ ||

ಧೀರೇಂದ್ರ ವಿಷ್ಣುತೀರ್ಥರು ಜಗನ್ನಾಥದಾ-
ಸಾರ್ಯರ ಸಹಿತ ವಾಸರಾಗಿ ವರದಾ
ತೀರದಿ ತಪವ ಗೈದು ಸಾಧನದ ಸಿದ್ಧಿಯಲಿ
ತೋರಿದರು ಸುರರಂತೆ ಈ ಧರೆಯ ಮೇಲೆ || ೪ ||

ಯಾವ ಸುರ ಋಷಿಗಳ್ರೋ ಆಕಷೌವರರೋ*
ದೇವ ಸುಖತೀರ್ಥ ಪೀಠದಿ ಶೋಭಿಸಿ
ಭೂವರಹ ವ್ಯಾಸ ಶ್ರೀರಾಮ ಕಾಪಾಸರದಿ [?]
ದೇವ ದೇವೇಶ ಶಿರಿವಿಟ್ಠಲನ ಪೊಂದಿಹರು || ೫ ||

೨೫

**ಸತ್ಯಬೋಧ ಗುರುವೇ ನಿಮ್ಮ ಪಾದ**
ನಿತ್ಯ ನುತಿಸಿ ಕೃತಕೃತ್ಯನಾಗಿ ಬಾಳುವೆ
ಭೃತ್ಯಜನರಿಗೆ ಜೀವೋತ್ತಮರ ಸುಶಾಸ್ತ್ರ
ವೇತ್ತರಾಗಿ ಬೋಧಿಸಿದಿರುತ್ತಮಾಧಿಕಾರ || ಪ ||

ಯೋಗಿವರ್ಯನೆ ಮಹಾ ಭಾಗವತರ ಪ್ರಿಯ
ಭಾಗವತಾದಿ ಶಾಸ್ತ್ರದಾಗಾಧ ಜ್ಞಾನಿಯೆ
ಭೋಗಿಸುವ ಸಂಚಿತ, ಆಗಾಮಿ ನಿಷ್ಕರ್ಮ
ನೀಗುವವು ನಿಮ್ಮ ಸುಯೋಗವಾದಾಕ್ಷಣದಿ || ೧ ||

ಸುಖತೀರ್ಥರೊಲುಮೆಯ ಸುಖಪ್ರಾರಬ್ಧ ಭೋಕ್ತನೆ
ಸಖನಾಗಿ ಸಜ್ಜನರಿಗೆ ಮುಕುತಿ ಮಾರ್ಗ ತೋರಿದೆ
ಸಕಲ ಭಾಗವತ ಧರ್ಮ ಪ್ರಕಟಗೈದು ಸತ್ಕರ್ಮ
ಶಕುತಿ ನಿಮ್ಮ ಪೊಗಳಲು ಭಕುತಿ ಸಾಲದೆನ್ನದು || ೨

---

* ಒರೆಗಲ್ಲು

ಸುರರಾಜನಂತೆ ಭೂಸುರ ಸಮೂಹವನಾಳ್ವ
ಹರಿದಾಸ ಶ್ರೇಷ್ಠರಿಂದ ವರಣಿಸಿಕೊಂಡ ಕವಿಯೇ
ಎರಡಿಪ್ಪತ್ತು ವರುಷ ವರವ್ಯಾಸ ಶ್ರೀ ರಾಮ
ಸಿರಿಸಹಿತ ಅರ್ಚಿಸಿದೆ ಶಿರಿವಿಟ್ಠಲರ ಸೇರ್ದೆ ॥ ೩ ॥

೨೬

**ಮಂಗಳಂ ಗುರು ಸತ್ಯಬೋಧಗೆ**
ಮಂಗಳಂ ಮಾರ್ಕಾಂಡೇಯಗೆ ॥ ಪ ॥

ಹರಿಯಾಚಾರ್ಯರ ಸುತರಿಗೆ ಮಂಗಳ
ಅರಳಾಂಬಿಕೆಯಾ ಕುವರಗೆ ಮಂಗಳ
ಗುರು ಸತ್ಯಪ್ರೀಯರ ಶಿಷ್ಯಗೆ ಮಂಗಳ
ಸಿರಿಮೂಲರಾಮನಾರಾಧಕರಿಗೇ ॥ ೧ ॥

ಶ್ರೀಮಧ್ವಮತ ಉದ್ಧಾರಗೆ ಮಂಗಳ
ಅಮಿತ ಬುಧಜನ ಪ್ರೇಮಗೆ ಮಂಗಳ
ಕಾಮಿತ ಫಲದಾಭೀಷ್ಟಗೆ ಮಂಗಳ
ಪ್ರೇಮದಿ ಭಕುತರ ಪೊರೆವರಿಗೇ ॥ ೨ ॥

ಗರಳವ ಭುಂಜಿಸಿದಾತಗೆ ಮಂಗಳ
ವರ ಭಾಗೀರಥಿ ಪಡೆದಗೆ ಮಂಗಳ
ಪುರ ಸವಣೂರೊಳು ಮೆರೆವಗೆ ಮಂಗಳ
ಸಿರಿ ಹನುಮನಯ್ಯನ ದಾಸರಿಗೇ ॥ ೩ ॥

ವರಭೂಸುರರಾಡಿದ ನಿಂದೆಯಾ ನುಡಿಯನಾ
ತ್ವರದಿ ಕೇಳಿ ತೋರಿದನು ಇವನು ಸೂರ್ಯನಾ ॥ ೩ ॥

ಕೊಡು ಭಕುತಿಯ ನಿನ್ನೊಳು ಗುರುಸತ್ಯಬೋಧನೇ
ಬಿಡಿಸೋ ನಿನ್ನಡಿಗೆ ಕಟ್ಟಿಕೊಳ್ವೆ ಕೊರಳನೇ ॥ ೪ ॥

ಹರಿವಾಯುಗಳಲ್ಲಿ ಕೊಡು ನೀ ನಿಜಭಕುತಿಯನೇ
ವರದ ಶ್ರೀ ಹನುಮೇಶವಿಟ್ಠಲನಡಿಸೇವಕನೇ ॥ ೫ ॥

## ೩೦

**ನೋಡಿದೆ ಗುರುಗಳ ನೋಡಿದೆ** ॥ ಪ ॥

ನೋಡಿದೆನು ಗುರುಗಳನು ವಂದನೆ
ಮಾಡಿದೆನು ಚರಣಾಬ್ಜದಲಿ ಕೊಂ-
ಡಾಡಿದವರಿಗೆ ಬೇಡಿದ್ವರಗಳ
ನೀಡಿ ಪೊರೆಯುವ ಸತ್ಯಬೋಧರ ॥ ೧ ॥

ಸತ್ಯಪ್ರಿಯರು ಕರೆದು ಆಶ್ರಮ-
ವಿತ್ತು ಶ್ರೀ ಮಾನಾಮಧುರೆಯಲಿ
ಉತ್ತರಾದಿಮಠಾಧಿಪೀಠವ
ಹತ್ತಿ ಸುರರಾಯನಂತಾಳ್ದರ ॥ ೨ ॥

ಹತ್ತು ಮತ್ತೊಂಬತ್ತು ವರುಷದಿ
ಸುತ್ತಿ ತೀರ್ಥ ಕ್ಷೇತ್ರಗಳ ಬಂ-
ದಿತ್ತ ಸವಣೂರಲ್ಲಿ ತಾವಿ-
ಪ್ಪತ್ತು ಮತ್ತೊಂದೊರುಷ ಮೆರೆದರ ॥ ೩ ॥

ಭೇದ ಮತವನೆ ಬೋಧಿಸುತ ದು
ರ್ವಾದಿಗಳ ನಿರ್ವಾದ ಮಾಡುತ ಸದಾ
ಬಾದರಾಯಣರಾ ಮೂರ್ತಿಯ
ಪಾದಪದ್ಮಗಳಾರಾಧಕರ ॥ ೪ ॥

ಗರಳ ಮಿಶ್ರವ ಮಾಡಿ ಪಾಕದೊಳಿರಿಸೆ
ಸೂದನು ಶ್ರೀಹರಿಗೆ ತಾವ್
ಅರಪಿಸಿದ ನೈವೇದ್ಯ ಬಿಡೆವೆಂದರಿತು
ಅದನುಂಡರಗಿಸಿದ ಘನರ ॥ ೫ ॥

ತರ್ಕಿಸುತಲಿರೆ ರಾತ್ರಿ ಭೋಜನ
ವಕ್ರಯತಿಗಳಿವರೆಂದು ಕುಹಕರು
ಅರ್ಕನನು ರಾತ್ರಿಯಲಿ ತೋರಿದ
ಮಾರ್ಕಾಂಡೇಯಾಂಶಜರ ಮೂರ್ತಿಯ ನೋಡಿದೆ ॥ ೬ ॥

ಹೋಗಿ ಕಾಶಿಗೆ ಬರಲು ಯೋಚಿಸ-
ಲಾಗಿ ತಾನೊಲಿದಿವರಿಗೋಸುಗ-
ವಾಗಿ ಮತ್ತೀ ಮರದ ಬುಡದಲಿ
ಭಾಗೀರಥಿ ಮೈದೋರೆ ಮಿಂದರ ॥ ೭ ॥

ಸೊನ್ನಿ ರಾಮಾಚಾರ್ಯರಿಗೆ
ಮುಂದಿನ್ನ ಕೋಡಗ ಜನುಮ ಬಂದಿರೆ
ಮನ್ನಿಸುತೆ ಪ್ರಾರಬ್ಧ ಪರಿಹರ-
ವನ್ನು ಗೈದಿಹ ಘನ್ನ ಮಹಿಮರ ॥ ೮ ॥

ಸತ್ಯಸಂಧರೆನ್ನುತ್ತ ಆಶ್ರಮ
ವಿತ್ತು ಶಿಷ್ಯಗೆ ಆಯುವಿಲ್ಲದಿರೆ
ಮತ್ತೆ ಆಯುರ್ದಾನವನು
ಮಾಡುತ್ತ ಕಾಯ್ದ ಮಹಾತ್ಮರನಾ ॥ ೯ ॥

ಬಂದು ಸೇವಿಪ ಸುಜನ ವೃಂದವ
ಹೊಂದಿ ಪೊರೆಯುತ ಸ್ವರ್ಣಪುರದಲಿ
ನಿಂದು ವೃಂದಾವನದಿ ಪೊರೆವ ಕ
ರ್ಮಂದಿಗಳ ಪಾದದ್ವಂದಕಮಲವ || ೧೦ ||

ಎಂತು ವರ್ಣಿಪೆ ಮಹ ಮಹಿಮೆಗಳ
ಸಂತತದಿ ಹನುಮೇಶವಿಟ್ಠಲನ
ಚಿಂತಿಸುವ ಏಕಾಂತ ಭಕುತರ
ಚಿಂತಿತಾರ್ಥವನೀವ ಗುರುಗಳ || ೧೧ ||

೩೧

**ಸುಪ್ರಭಾತ ನಿಮಗೆ ಶ್ರೀಸತ್ಯಬೋಧ**
ಸುಪ್ರಕಾಶದಿ ಮೆರೆವ ಭಕ್ತ ಪ್ರಮೋದ || ಪ ||

ಚಿರಂಜೀವಿ ಮಾರ್ಕಾಂಡೇಯ ಋಷಿ ಅಂಶದಿ
ಧರೆಯೊಳಗೆ ಅವತರಿಗೆ ಮೆರೆವ ಭಾಗ್ಯ
ಇರುವದಿನ್ನಾರಿಗೆ ನಾನರಿಯೆ ತವಚರಣ
ಸ್ಮರಣೆಯಿಂ ಪೂರ್ಣಾಯುವನ್ನು ಪಡೆವೆ || ೧ ||

ರಾಯಚೂರೊಳಗೆ ಹರಿಯಾಚಾರ್ಯ ಅರಳಾಂಬೆ
ಜಾಯಾ ಸಮೇತ ಸುಖದಿಂದ ಇರಲು
ರಾಯನಹೋಬಲ ನರಸಿಂಹನೊಲಿಮೆ ತರು-
ವಾಯ ಜನ್ಮಿಸಿದ ರಾಮಾರ್ಯ ಕುವರಾ || ೨ ||

ಅತ್ರಿ ಕುಲದೊಳಗೆ ಸತ್ಪುತ್ರನೆಂದವತರಿಸೆ
ಪಿತೃಮಾತೃ ಸೇವೆ ಮಾಡಿ ಸಂತೈಸಿ
ತತ್ರ ಪಾಠ ಪ್ರವಚನಾದಿಗಳ ಮುಗಿಸುತ ಕ-
ಲತ್ರ ಪುತ್ರರ ಕೂಡಿ ಸುಖದೊಳಿರಲು || ೩ ||

ವರ ಚೈತ್ರ ಶುದ್ಧ ತ್ರಯೋದಶಿ ರಕ್ತಾಕ್ಷಿಯ
ವರುಷದಲಿ ಸನ್ಯಾಸ ಸ್ವೀಕರಿಸುತಾ
ಪಿರಿದಾದ ಮಾನಾಮದುರೆಯ ಕ್ಷೇತ್ರದಲಿ
ಗುರುಗಳಾರಾಧನೆಯ ಗೈದ ಗುರುರಾಯ || ೪ ||

ಸತ್ಯಪ್ರಿಯಗುರು ಕರಕಮಲ ಸಂಜಾತ
ಸತ್ಯಬೋಧರು ನೀವು ಜಗದೊಳಗೆ ಮೆರೆದು
ನಿತ್ಯವೂ ಸವಣೂರು ನಗರದಲಿ ನಿಂತು ತವ
ಭಕ್ತರನು ಪಾಲಿಸುವ ಪರಮ ಕರುಣಾಳು || ೫ ||

ಖಂಡೇರಾವ ಸಂಗೋ ನವಾಬ ಹಕೀಮಖಾನ
ದಂಡ ಪ್ರಣಾಮದಿ ಗುರುಗಳನು ಪ್ರಾರ್ಥಿಸಲು
ಪುಂಡರೀಕಾಕ್ಷನ ಪ್ರತಿದಿವಸ ಅರ್ಚಿಸಲು
ಕಂಡು ಭಕ್ತರು ನಲಿಯೆ ಸವಣೂರಿನ || ೬ ||

ಗುತ್ತಿಯ ಮುರಾರಿ ಘೋರ್ಪಡೆಯೆಂಬ ದೊರೆ ತಾನು
ಮುತ್ತುಮಾಣಿಕ್ಯದಂಬಾರಿ ಸಹಿತ
ಉತ್ತಮೋತ್ತಮ ಹಸ್ತಿ ಮರಿಗಳನು ಕೊಡಲು ನೀ
ವಿತ್ತ ನಾಮಗಳು ಜಯ ವಿಜಯರೆಂದು || ೭ ||

ತಪಸಿನಾ ಫಲದಿಂದ ಅಕ್ಷಯ್ಯ ತೃತೀಯದಲಿ
ತ್ರಿಪಥೆ ಗಾಮಿನಿ ಗಂಗೆಯ ತರಿಸಿದ
ಅಪರಿಮಿತ ವೈಭವದಿ ಮೆರೆವ ಸ್ಥಳವಿಂದಿಗೂ
ವಿಪುಲ ಜಲ ಸಂಚಯವೆ ವಿಷ್ಣುತೀರ್ಥ || ೮ ||

ನೀರಿಲ್ಲದೂರು ಸವಣೂರೆಂಬ ಗಾದೆಯನು
ದೂರು ಮಾಡಿದ ಮಹಾಮಹಿಮ ಗುರುರಾಯ
ವಾರಣಾಸೀಪುರಕೆ ಮಿಗಿಲಾಯಿತೀ ಕ್ಷೇತ್ರ
ಚಾರು ರುದ್ರಾಲಯದ ವಿಷ್ಣುತೀರ್ಥ || ೯ ||

ಕರ್ಜಗೀದಾಸರ ಮಹಿಮೆಯನು ಭರದಿ ನೀವು
ಭರ್ಜರೀ ಬೆಳೆಸಿದಿರಿ ಭೂಮಿಯೊಳಗೆ
ನಿರ್ಜರಾಧಿಪನ ವೈಭವದಂತೆ ಭಾಗ್ಯವನು
ಆರ್ಜಿಸಿ ಮೆರೆದ ನಿರುಪಮ ಕಾರುಣ್ಯಮೂರ್ತಿ || ೧೦ ||

ಮುನ್ನ ಜಗದೊಳಗೆ ಬಹು ಮಿಗಿಲಾದ ದಾಸ ಜ-
ಗನ್ನಾಥವರ್ಯಗೆ ಪಾದುಕೆಗಳಿತ್ತು
ಘನ್ನವಾಗಿಹ ಮಾನ್ವಿ ಮಠದೊಳಗೆ ಸನ್ಮಾನ್ಯ-
ರುನ್ನತದ ಸತ್ಕೀರ್ತಿ ಶೋಭಿಸುವದು || ೧೧ ||

ಸೊನ್ನೆಯ ಕೋನ್ಹೇರಿಯಾಚಾರ್ಯರೊಬ್ಬರು
ತನ್ನ ಜನ್ಮಾಂತರದ ಕರ್ಮ ಫಲಕಾಗಿ
ಇನ್ನೀ ಜಗದೊಳಗೆ ಮರ್ಕಟನ ರೂಪದಿಂ
ನಿನ್ನನಾಶ್ರಯಿಸಲುದ್ಧರಿಸಿದ ಮಹಿಮಾ || ೧೨ ||

ದುರುಳ ಶಿಷ್ಯನು ಗುರಾಚಾರ್ಯನೆಂಬೋರ್ವನು
ಗರಳವನು ಬೆರೆಸಿದ ಪಾಕವನು ರಚಿಸಲು
ಹರಿಯ ನೈವೇದ್ಯವೆಂದೂಟವನು ಮಾಡುತ್ತ
ಹರುಷದಿಂಮೃತಮಯವಾಗಿ ತೋರಿಸಿದೆ || ೧೩ ||

ವಿಷದ ಬಾಧೆಯ ಕಡಿಮೆ ಮಾಡಲೋಸುಗ ಮಧ್ಯ
ನಿಶಿಯಲಿ ಭೋಜನವ ಮಾಡುತಿರಲು
ಅಶನವದು ನಿಂದ್ಯವೆಂದುಸುರಿದ ದ್ವಿಜನು ತಾ
ನಿಶಿಯಲ್ಲೇ ಸೂರ್ಯನಂ ಕಂಡು ಬೆರಗಾಗೆ || ೧೪ ||

ಸನಕಾದಿ ವಂದ್ಯಗೆ ಕನಕಾಭಿಷೇಕವನು
ಕನಕಮಯ ಹರಿವಾಣಿ ರತ್ನ ಮಂಟಪದಿ
ಇನಕುಲದ ಮಹಿಮನನು ದಿನದಿನವು ಅರ್ಚಿಸುವ
ಕನಕಮುದ್ರೆಗಳಿತ್ತು ಶೋಭಿಸುವ ಗುರುರಾಜ || ೧೫ ||

ಆಯುಷ್ಯವತಿಕ್ರಮಿಸಲಾಗ ಸತ್ಯಬೋಧ
ರಾಯ. ಪೀಠಕೆ ಸತ್ಯಸಂಧರ ನೇಮಿಸೆ
ಆಯುತೀಶ್ವರನಾಯು ಅಲ್ಪವಿರುವದ ಕಂಡು
ಪಾಯಸ ಪ್ರಸಾದದಿಂ ಪರಿಹರಿಸುತ || ೧೬ ||

ಶೋಭನ ಕೃತವದ್ಯ ಫಾಲ್ಗುಣ ಪ್ರತಿಪದೆ
ತಾಭರದಿ ದಿಗ್ವಿಜಯ ಶ್ರೀ ರಾಮಚಂದ್ರರನ
ಶೋಭಿಸುವ ಚರಣಗಳ ಮುದದಿಂದ ಸ್ಮರಿಸುತ
ಈ ಭವದ ಜ್ಯೋತಿಯದು ಹರಿಪದವನ್ನೈದುತ || ೧೭ ||

ಪರಮ ಮಂಗಳವಾದ ಸವಣೂರು ಪುರದೊಳಗೆ
ಕರುಣಾಳು ಗುರುವೆ ಸೇವೆಯ ನಿತ್ಯ ಪಡೆದು
ಪರಪೀಡೆ ವ್ಯಾಧಿ ದಾರಿದ್ರ್ಯ ದುಷ್ಫಲವ ತಾ
ಪರಿಹರಿಸಿ ಭಕ್ತರನು ಉದ್ಧರಿಸುತಾ || ೧೮ ||

ಸವಣೂರು ಪುರದೊಳಗೆ ಕಲೆತ ಭಕ್ತಾದಿಗಳು
ಪವಮಾನ ಮತ ದಿವ್ಯ ಚಂದ್ರ ನೀನೆಂದು
ತವಕದಿಂದಲಿ ನಿಮ್ಮಯ ಚರಣ ಭಜಿಸುತ
ಭವತಾಪಗಳನ್ನೆಲ್ಲ ಪರಿಹರಿಸಿಕೊಳ್ಳುತಾ || ೧೯ ||

ಕಲಿಯುಗದಿ ಬೆಳಗುತಿಹ ಕಾರುಣ್ಯಗುಣ ಪೂರ್ಣ
ಬಲಿಯುತಿಹ ಪಾಪಗಳ ಬಲುಬೇಗ ಕಡಿದು
ದಲಿತರನು ಕೈಪಿಡಿದು ರಕ್ಷಿಸುವ ಮುದದಿಂದ
ಒಲಿಯುತಿಹ ಭಕ್ತರಿಗೆ ಮುಕ್ತ ಹ[illegible]ವ ತೋರಿ || ೨೦ ||

ಕರಮುಗಿದು ಬೇಡುವಗೆ ಕಾಮಧೇನುವೆ ನೀನು
ಶಿರಬಾಗಿಹ ಭಕ್ತರಿಗೆ ಕಲ್ಪವೃಕ್ಷ
ಪರಿಪರಿಯ ಸೇವೆಯನು ಭಕ್ತಿಯುಲಿ ಅರ್ಪಿಸಲು
ಪರಮ ಹರುಷದಲಿ ಭಕ್ತರನು ಕಾಯುವ || ೨೧ ||

ಸತ್ಯಬೋಧರ ಚರಿತೆ ಪರಮಪಾವನ ಚರಿತೆ
ಸತ್ಯಬೋಧರ ಕ್ಷೇತ್ರವದು ಪುಣ್ಯಕ್ಷೇತ್ರ
ಸತ್ಯಬೋಧರ ಕರುಣೆ ಹರಿಭಕ್ತರಾಭರಣ
ಸತ್ಯಬೋಧಗೆ ನಮನ ಶತ್ರುಗಳ ದಮನ || ೨೨ ||

ಸತ್ಯಬೋಧರ ಸ್ಮರಣೆ ಭವದ ಭವಣೆಯ ಹರಣ
ಸತ್ಯಬೋಧರ ತೀರ್ಥವೀವುದಿಷ್ಟಾರ್ಥ
ಸತ್ಯಬೋಧರ ಸೇವೆ ಭವಜಲಧಿಯೊಳು ನಾವೆ
ಸತ್ಯಬೋಧರ ನಾಮ ಪಾಪ ನಿರ್ನಾಮ || ೨೩ ||

ನಸುಕಿನಲಿ ಈ ಸುಪ್ರಭಾತ ಗೀತೆಯ ಪಠಿಸೆ
ನಶಿಸಿ ಹೋಗುವವೆಲ್ಲ ದುರಿತರಾಶಿಗಳು
ದಾಸ ಸರ್ವೋತ್ತಮನ ಪುತ್ರ ಸುಶೀಲೇಂದ್ರ ಕೃತ
ಭೂಸುರ ಶ್ರೇಷ್ಠ ಗುರು ಕವನ ಪಾವನವು || ೨೪ ||

ಮಂಗಲವು ಶ್ರೀ ಮೂಲ ದಿಗ್ವಿಜಯ ರಾಮನಿಗೆ
ಮಂಗಲವು ಶ್ರೀ ಮಧ್ವ ಜಯ ವ್ಯಾಸತೀರ್ಥರಿಗೆ
ಮಂಗಲವು ಶ್ರೀ ಸತ್ಯಬೋಧಾರ್ಯ ಗುರುವಿಗೆ
ಮಂಗಲವು ಸಕಲ ಸದ್ಭಕ್ತ ವಿಬುಧರಿಗೆ || ೨೫ ||

## ೩೨

**ಕೋದಂಡನ ಹೆಗಲಿಗಿರಿಸಿ ಶ್ರೀರಾಮಚಂದ್ರ ಪುತ್ಥಳಿ**
ಮಡದಿ ಸೀತೆ ಅಭಯಹಸ್ತ ತೋರಿಸಿರಲು ಮೈಥಿಲಿ
ಸೌಜನ್ಯದಿ ಸೌಮಿತ್ರಿಯು ನಕ್ಕೆ ನಕ್ಕು ನಿಂತಿರೆ
ಯತಿಯ ಹರುಷ ಉಕ್ಕಿ ಬರಲು ತುಂಬಿ ಬಂತು ಕಣ್ಣು ಕೊರಲಿ
ಭಕ್ತಿಯ ಬಾಷ್ಪಾಂಜಲಿ ರಾಮ ಸೀತೆ ಲಕ್ಷ್ಮಣರಡಿ
ಗಳನು ತೊಳೆದು ಹರಿಯಿತು ಹರುಷ ತುಂಬಿ ಮೊರೆಯಿತು

ಯತಿಯ ಭಕ್ತಿ ಧವಲ ಕೀರ್ತಿಯಾಗಿ ಸುತ್ತುವರಿಯಿತು
ಮಡುಗೊಂಡಳು ಗಂಗೆ ಬಂದು ವಿಷ್ಣುತೀರ್ಥದಲ್ಲಿಯೇ
ಶ್ರಾವಣೂರ ಸೀಮೆಯಲ್ಲಿ ಯತಿಯ ಸೇವೆ ಸಲ್ಲಿತೆಂದು
ಗಂಗೆ ಬಂದಳಲ್ಲಿಯೇ ಯತೀಶ್ವರರ ಸಂಕಲ್ಪಕೆ
ಸತ್ಯ ಕಳಸವಿಟ್ಟಿತು ದಿಗ್ದಿಗಂತದಂತಕೆಲ್ಲ
ಧವಲ ಕೀರ್ತಿ ಮುಟ್ಟಿತು ಯತೀಶ್ವರ ಗೀತೆ ಹರುಷ
ಸತ್ಯ ಪದ್ಮ ಕಂಪಿಡೆ ನಂಬಿ ನಚ್ಚಿ ಶರಣೆನ್ನಲು
ಯತಿಗಳಡಿಗೆ ಬಾಗಲು ಹುಣ್ಣಿಮೆ ಬೆಳದಿಂಗಳೆಲ್ಲ
ಹಾಲ ಕರೆವುದಂದಿಗೆ ಮುಗಿಲ ಜೇನು ಕುಡಿವುದೆಲ್ಲಿ
ಜೀವ ಜೀವವಂದಿಗೆ ಹೇಪಟಲವರಳಿದಂಥ
ಸತ್ಯ ಪದ್ಮ ಕಂಡಿತು ಜೀವಭ್ರಮರವದರ ಜೇನ
ನೆಲ್ಲವನ್ನೆ ಉಂಡಿತು ಸತ್ಯಬೋಧ ಯತೀಶ್ವರರ
ಅಭಯ ಹಸ್ತದಡಿಯಲಿ ಅವರಪಾರ ಕರುಣೆಯಿರಲಿ
ನನ್ನ ನಮ್ರ ನುಡಿಯಲಿ ಅವರ ನೆನಹೆ ನನ್ನ ಉಸಿರು
ಅವರ ಹರಕೆ ಜೀವನ ಅವರ ಕರುಣೆಯಿರಲು ನನ್ನ
ಬಾಳು ನಿತ್ಯ ಪಾವನ.

## ೨೨

## ರಥವಾನೇರಿದಾ ಸತ್ಯಬೋಧಾ

ಸತ್ಯಪ್ರಿಯರ ಕುವರಾ || ಪ ||

ಧಾರಿಣಿಯೊಳು ತಮ್ಮಾರಾಧಕರಿಗೆ
ಸಾರಸೌಖ್ಯಗಳ ಸೂರಿಗ್ಯೆಯಲೆಂದು || ಅ ಪ ||

ಲಕ್ಷ್ಮೀಶನ ಪೂಜಕನೆ ನಿನ್ನ ಯೋಗಶಕ್ತಿಯಲಿ
ವಿಷಕಂಠನೊಲಿಸಿ ಮೃಕಂಡುಜ ಋಷಿಯನು ಸ್ಮರಿಸಿ
ವಿಷವ ಸುಖದಿ ಜೀರ್ಣಿಸಿದ ಗುರುವೆ ದು-
ರ್ವಿಷಯ ವಿಷಯ ಕಸಿಪಿಸಿ ಬಿಡಿಸೆಂದು || ೧ ||

ಟೊಂಗೆಯಿಂದಿಳಿದು ಬಂದಳು ಗಂಗೆಯು ನಿನಗೊಲಿದು
ಕತ್ತಲೆಯಲ್ಲಿ ಬಿಸಿಲು ತೋರ್ದ ಮಹಾತ್ಮನು ನೀನು
ಕತ್ತಲೆಯಂತಿಹ ಮೋಹವ ಕೀಳುತ
ಭಕ್ತಿಯ ಬೆಳಕನು ತೋರಿಸಲೆಂದು ॥ ೨ ॥

ಮಾರ್ಕಾಂಡೇಯ ಮುನಿಯೇ ನೀನು
ಗುರು ಸತ್ಯಬೋಧಾ ಗುರು ಸತ್ಯಬೋಧಾ
ಶರಣು ಶರಣೂ ಯೆನ್ನ ಧೊರೆಯೆ
ಪೊರೆಯೊ ಧನ್ಯರ ನಿಧಿಯೆ
ಧರೆಯೊಳು ವರಹವಿಠಲನ ಸ್ಮರಿಸುತ
ಪುರ ಸವಣೂರಲಿ ಮೆರೆವಾ ಯತಿಯೇ ॥ ೩ ॥

## ೩೪

**ಸತ್ಯಬೋಧರಾಯಾ ಏನೋ ನಿಮ್ಮ ಮಾಯಾ**
ಸತ್ಯಪ್ರಿಯ ಕುವರಾ ಶ್ರೀ ಸತ್ಯಬೋಧರಾಯಾ ॥ ಪ ॥

ಸುವರ್ಣಪುರದಲಿ ವಾಸ ಮಾಳ್ಪ ಧೀರಾ
ಭಕ್ತರಭೀಷ್ಟವ ಪೂರೈಸುವ ಧೀರಾ ॥ ೧ ॥

ಶುದ್ಧ ಶಿಲೆಯ ಮಧ್ಯದಿ ತಿದ್ದಿ ನಾಮವ ಧರಿಸಿ
ವೃಂದಾವನದಿ ನೆಲೆಸಿ ದಿವ್ಯ ತಪಸ್ವಿಯೆನಿಸಿ ॥ ೨ ॥

ವಿಷವನ್ನು ಭುಂಜಿಸಿ ರಾತ್ರಿ ಸೂರ್ಯನ ತೋರಿಸಿ
ಭಾಗೀರಥಿಯ ತರಿಸಿ ವಿಷ್ಣುತೀರ್ಥದಲಿರಿಸಿ ॥ ೩ ॥

ಸತ್ಯಸಂಧರ ಕರೆಸಿ ಆಯುರ್ದಾನವ ಮಾಡಿ
ಮಾರ್ಕಾಂಡೇಯರೆನಿಸಿ ಮೂಲರಾಮನ ಪೂಜಿಸಿ || ೪ ||

ಕಷ್ಟದಲಿ ಸಿಲುಕೀ ಬಂದ ಭಕ್ತರ ಕಾಮ
ಧೇನು ಎನಿಸಿ ವರಹವಿಠಲನ್ನ ಪೂಜಿಸಿ || ೫||

೩೫

**ಸ್ವಾಮಿ ಲಾಲಿ ಸತ್ಯಬೋಧ ಲಾಲಿ**
ಸತ್ಯಪ್ರಿಯ ಪ್ರೇಮ ಶಿಷ್ಯ ಸ್ವಾಮಿ ಲಾಲಿ || ಪ ||

ಅರಳಮ್ಮನಾ ಪುತ್ರ ಸ್ವಾಮಿ ಲಾಲಿ
ಅಜ್ಞಾನ ಕಳೆವೂ ಸ್ವಾಮಿ ಲಾಲಿ || ೧ ||

ರಾಮಪ್ರಭು ಸೇವಕ ಸ್ವಾಮಿ ಲಾಲಿ
ರಾಮಧ್ಯಾನ ತತ್ಪರ ಸ್ವಾಮಿ ಲಾಲಿ || ೨ ||

ದ್ವೈತಮತೋದ್ಧಾರಕ ಸ್ವಾಮಿ ಲಾಲಿ
ಶ್ರೋತೃಜನ ಪೋಷಕ ಸ್ವಾಮಿ ಲಾಲಿ || ೩ ||

ಸಂತತ ಸ್ಮರಿಪರ ಸ್ವಾಮಿ ಲಾಲಿ
ಶ್ರೀರಮಣನ ತೋರಿಸೊ ಸ್ವಾಮಿ ಲಾಲಿ || ೪ ||

ಸರ್ವ ಕ್ಷೇತ್ರ ಸಂಚರಿಪ ಸ್ವಾಮಿ ಲಾಲಿ
ಸುವರ್ಣಪುರವಾಸಿ ಸ್ವಾಮಿ ಲಾಲಿ || ೫ ||

ಸಣ್ಣ ಬಾಲಗೆ ಆಯು ಸ್ವಾಮಿ ಲಾಲಿ
ಸತ್ಯಸಂಧರಿಗೆ ಆಶ್ರಮ.ಯಿತ್ತ ಸ್ವಾಮಿ ಲಾಲಿ ॥ ೬ ॥

ಭಕ್ತವತ್ಸಲಾ ಸತ್ಯಬೋಧ ಲಾಲಿ
ಬಾದರಾಯಣ ಸೇವಕ ಸ್ವಾಮಿ ಲಾಲಿ ॥ ೭ ॥

೩೬

**ಪೋಷಿಸೊ ಸತ್ಯಬೋಧ ಗುರುತೀರ್ಥ**
ದೇಶಿಕ ಶ್ರೀ ಸತ್ಯಪ್ರಿಯ ಕರಜಾತ ॥ ಪ ॥

ದಾಶರಥಿಯ ಪದಧ್ಯಾನನಿರತ
ದೋಷಗಳೆಣಿಸದೆ ಪೊರೆ ಎನ್ನ ಸತತ ॥ ಅ ಪ ॥

ದೇಶದಾದ್ಯಂತ ವಿತತ ಚರಿಸುತ
ದೂಷಿತ ಮತಗಳ ಬೇರನಳಿಸುತ್ತ
ಕೇಶಮತಾರ್ಥ ವಿಷಶೋಷ ತೋರಿಸುತ
ದ್ವೇಷಿರಾಜರ ಮದವಿಳಿಸಿದ ಚರಿತ ॥ ೧ ॥

ವಿಷವನುಂಡದನರಗಿಸುತ
ನಿಶೆಯಲಿ ರವಿಯ ಬಾನಲಿ ತೋರಿಸುತ್ತ
ಹುಸಿಯ ಮಾಡುತ ನಿಷಿದ್ಧ ಪದಾರ್ಥ
ಎಸೆವ ಗಂಗೆಯ ಕೂಪಕೆ ತಂದ ಮಹಿತ ॥ ೨ ॥

ಬೆಸೆದು ದಾಸವ್ಯಾಸ ಕೂಟ ಪೋಷಿಸುತ
ಅಸಮ ನಾಲ್ವರು ಶಿಷ್ಯರ ಪಡೆದಿರುತ
ಅಸುಪತಿ ಪಿತಾನಂತ ವಿಠಲನೊಲಿಸುತ್ತ
ಯಶಸಿ ಭಕ್ತರ ಕಾವ ಸವಣೂರಲಿರುತ ॥ ೩ ॥

# ಚರಿತ್ರಾತ್ಮಕ ದೀರ್ಘ ಕೃತಿಗಳು

## ೩೭

**ಸತ್ಯಬೋಧಾರ್ಯರ ವ್ರತತಿಜಾಂಘ್ರಿಗಳಲ್ಲಿ**
ಸತತ ಶರಣಾದ ನಾ ಹಿತದಿ ಪಾಲಿಪರು
ಪ್ರತತ ಭೂಮಾದಿ ಗುಣ ಸಿಂಧು ಪುರುಷೋತ್ತಮನ
ವಿತತ ಮನದಲಿ ಧ್ಯಾನಿಸಿ ಒಲಿಸಿಕೊಂಡ ॥ ಪ ॥

ಹಂಸನಾಮಕ ವಿಷ್ಣುವನರುಹಾಸನ ಸನಕ
ದೂರ್ವಾಸ ಮೊದಲಾದ ಗುರು ವಂಶಜಾತ
ದಶಪ್ರಮತಿ ಸರಸಿಜನಾಭ ನರಹರಿತೀರ್ಥ
ಬಿಸಜ ಚರಣಂಗಳಲಿ ಸತತ ನಾ ಶರಣು ॥ ೧ ॥

ಮಾಧವ ಅಕ್ಷೋಭ್ಯ ಜಯವಿದ್ಯಾಧಿರಾಜ ರಾ
ಜೇಂದ್ರ ಕವೀಂದ್ರ ವಾಗೀಶ ರಾಮಚಂದ್ರ
ವಿಭುದೇಂದ್ರ ವಿದ್ಯಾನಿಧಿಗಳು ಈ ಸರ್ವ
ಸುತಪೋನಿಧಿ ಯತಿವರ್ಯರಿಗೆ ನಮಿಪೆ ॥ ೨ ॥

ವೇದಾಂತ ಕೋವಿದರು ರಘುನಾಥ ರಘುವರ್ಯ
ಪದವಾಕ್ಯ ತತ್ವಜ್ಞ ರಘೂತ್ತಮಾರ್ಯರಿಗೆ
ವೇದವ್ಯಾಸ ಯತಿಗಳ ವಿದ್ಯಾಧೀಶರಿಗೆ
ವೇದನಿಧಿಗಳಿಗೆ ನಾ ಬಾಗುವೆ ಶಿರವ ॥ ೩ ॥

ಸತ್ಯವ್ರತ ಸತ್ಯನಿಧಿ ಸತ್ಯನಾಥರಿಗೆ
ಸತ್ಯಾಭಿನವ ಸತ್ಯಪೂರ್ಣರಿಗೆ ನಮಿಪೆ
ಸತ್ಯವಿಜಯರಿಗೆ ಸತ್ಯಪ್ರಿಯ ಸತ್ಯಬೋಧರಿಗೆ
ಭೃತ್ಯ ನಾ ಎನ್ನ ವಂದನೆಗಳರ್ಪಿಸುವೆ ॥ ೪ ॥

ಸತ್ಯಬೋಧರ ಮಹಿಮೆ ಬಹು ಬಹು ಬಹುಳವು
ವೇದ್ಯ ಎನಗೆ ಅತಿ ಸ್ವಲ್ಪ ಮಾತ್ರ
ಅದರಲ್ಲು ಬಿಟ್ಟದ್ದು ಬಹು ಇಲ್ಲಿ ಹೇಳಿಹುದು
ಅತಿ ಕಿಂಚಿತ್ ಅಣುಮಾತ್ರ ಸುಜನರು ಲಾಲಿಪುದು ॥ ೫ ॥

ರಾಮಾಚಾರ್ಯರು ಸಣ್ಣ ವಯಸ್ಸಿನವರು
ನೇಮದಿಂದಾಶ್ರಮೋಚಿತ ಕರ್ಮಪರರು
ರಾಮ ಹಯಶೀರ್ಷ ನರಸಿಂಹನ ಗುಣರೂಪ
ಸಮುದ್ರದಿ ಜ್ಞಾನಭಕ್ತಿಯಲಿ ಧ್ಯಾನಿಪರು ॥ ೬ ॥

ಈ ರಾಯಚೂರ್ ರಾಮಾಚಾರ್ಯರೇ ಸತ್ಯಪ್ರಿಯ
ಗುರುಗಳ ಸಂಸ್ಥಾನ ಪೀಠಕ್ಕೆ ಬಂದು
ಸೂರಿವರ್ಯರು ಸತ್ಯಬೋಧತೀರ್ಥರು ಎಂದು
ಧರೆಯಲ್ಲಿ ಪ್ರಖ್ಯಾತರಾಗಿಹರು ಕರುಣಿ ॥ ೭ ॥

ಬಾದರಾಯಣ ಮಾಧ್ವ ಸಚ್ಛಾಸ್ತ್ರ ಬೋಧಿಸಿ
ಅಧಿಕಾರಿಗಳ ಉದ್ಧರಿಸಿ ಅಲ್ಲಲ್ಲಿ
ವೇದ ವಿರುದ್ಧ ದುರ್ವಾದಗಳ ಕತ್ತರಿಸಿ
ಮೇದಿನಿ ಸಜ್ಜನರ ಪೊರೆದಂಥ ಧೀರ ॥ ೮ ॥

ಪೀಠ ಆರೋಹಿಸಿದ ಪೂರ್ವ ಗುರುಗಳವೋಲು
ಮಠಕ್ಕೆ ಮಾನ್ಯಗಳ ಆಭರಣಗಳನ್ನ
ಪಟ್ಟಣ ಪ್ರಮುಖರು ಧನಿಕರು ಭೂಪಾಲರು
ಕೊಟ್ಟದ್ದು ಅಲ್ಲಲ್ಲಿ ಸ್ವೀಕರಿಸಿದರು ॥ ೯ ॥

ಸತ್ಯಪ್ರಿಯರಾರಾಧನೆಗಾಗಿ ಬಂದಿದ್ದ
ಸತ್ಯಬೋಧರ ಮಹಿಮೆಯನ್ನು ಲೆಕ್ಕಿಸದೆ
ಬಂಧಿಸಿದ ಶ್ರೀ ಮಠವ ರಾಮೇಶ್ವರ ರಾಜ
ಬಂತು ಸೈನ್ಯವು ತಿರುಚಿನಾಪಳ್ಳಿಯಿಂದ ॥ ೧೦ ॥

ತಿರುಚಿನಾಪಳ್ಳಿಯಿಂದ ಜಾನೋಜಿರಾವ್ ನಿಂಬಾ-
ಳ್ಕರನು ಸೈನ್ಯವನು ಕಳುಹಿಸಿದನು
ವಿರೋಧ ಬಿಡುಗಡೆ ಮಾಡಿ ಆ ರಾಜನ್ನ ಶಿಕ್ಷಿಸಿ
ಗುರುಗಳ ಕರೆತಂದ ತಿರುಚಿನಾಪಳ್ಳಿಗೆ || ೧೧ ||

ತಿರುಚಿನಾಪಳ್ಳಿಯ ಮ್ಲೇಚ್ಛ ರಾಜನು ಈ
ಗುರುಗಳ ಪ್ರಭಾವವ ಅರಿಯದೆ ಮೌಢ್ಯದಲಿ
ಪರಧನಾಪಹಾರಿಯು ಎಂದು ಆಪಾದಿಸಿ
ನಿರೋಧಿಸಿದ ಶೋಧನೆ ಮಾಡುವ ನೆವದಿ || ೧೨ ||

ಪರಿಶೋಧನೆಯಲ್ಲಿ ಮೈಲಿಗೆ ಆಗದಿರೆ
ಗುರುಗಳ ರಾಮದೇವರ ಪೆಟ್ಟಿಗೆಯ
ತಿರುಕಾಟ್ಟುಪಳ್ಳಿಗೆ ಕಳುಹಿಸಿ ಉಪೋಷಣದಿ
ಹರಿಯ ಮಾನಸ ಪೂಜೆ ಮಾಡುತ ಕುಳಿತರು || ೧೩ ||

ಜಾನೋಜಿರಾಯನು ವಾದಿಸೆ ಸುಲ್ತಾನ
ತನ್ನ ಸರ್ಕಾರ ಶೋಧಕರ ಕಳುಹಿಸಿದ
ತನ್ನ ಹಿರಿಯರು ಮತ್ತು ಇತರ ರಾಜರುಗಳ
ಚಿಹ್ನ ಮುದ್ರಿತ ಒಡವೆ ಮಾತ್ರವೆ ಕಂಡ || ೧೪ ||

ತನ್ನ ಹಿರಿಯರು ಇತರ ರಾಜರು ಕೊಟ್ಟ
ಘನತರ ಮರ್ಯಾದೆ ಕಂಡು ನಾಚಿ
ತಾನು ಗುರುಗಳಿಗೆ ಮಾಡಿ ಅಪರಾಧಕ್ಕೆ
ಮನನೊಂದು ಪಶ್ಚಾತ್ತಾಪ ತೋರಿಸಿದ || ೧೫ ||

ವಿರೋಧ ನೀಗಿಸಿ ನಿಂಬಳ್ಕರನ ಕೈಯಿಂದ
ಹರಿ ಪೂಜೆ ಗುರು ಪೂಜೆ ಮಾಡಿಸಿ ಕಾಣಿಕೆಯ
ಗುರುತರದಿ ಅರ್ಪಿಸಿದ ಆ ಮ್ಲೇಛರಾಜನು
ಗುರು ಸತ್ಯಬೋಧರ ಕೀರ್ತಿ ವರ್ಧಿಸಿತು || ೧೬ ||

ತಿರುಕಾಟ್ಟುಪಳ್ಳಿಯಿಂದಲಿ ಪೂಜೆ ಪೆಟ್ಟಿಗೆಯ
ತರಿಸಿ ಹರಿಪೂಜೆಯ ಮಾಡಿ ಮುದದಿಂದ
ಮರ್ಯಾದೆ ಕಾಣಿಕೆಗಳ ಕೊಂಡು ದಿಗ್ವಿಜಯ
ಚರಿಸಿದರು ಹರಿಗುರು ತೀರ್ಥಸ್ಥಳಗಳಿಗೆ ॥ ೧೭ ॥

ಮಾರ್ಗದಲಿ ತಂಜಾವೂರಿನ ರಾಜನು
ಶ್ರೀಗುರುಗಳಿಗೆ ಸೇವೆ ಸಲ್ಲಿಸಿದ
ನಗರದಲಿ ಪ್ರಮುಖ ಪಂಡಿತ ಗೋಸಾಯಿಯ
ನಿಗಮಾಂತ ವಾದದಲಿ ಸೋಲಿಸಿದರು ॥ ೧೮ ॥

ಕುಂಭಕೋಣದಿ ಬ್ರಾಹ್ಮಣರ ಬೀದಿಯಲ್ಲಿ
ಗಂಭೀರತರ ದೊಡ್ಡ ಮಂಟಪ ಕಟ್ಟಿ
ಸಂಭ್ರಮದಿ ಹರಿಪೂಜೆಗೈದು ವಿದ್ವಜ್ಜನ
ಸಭೆಯ ಕೂಡಿ ವಾಕ್ಯಾರ್ಥ ನಡೆಸಿದರು ॥ ೧೯ ॥

ಶ್ರೀರಂಗ ಕ್ಷೇತ್ರ ತಂಜಾವೂರು ತರುವಾಯ
ಸಾರಂಗಪಾಣಿ ಕುಂಭೇಶ್ವರ ಕ್ಷೇತ್ರ
ಪರಿಕಲ್ಲು ತಿರುಕೋಯಿಲೂರು ಮಾರ್ಗದಿ ಬಂದು
ಸೇರಿದರು ತಿರುಪತಿ ವೇಂಕಟಾಚಲಕ್ಕೆ ॥ ೨೦ ॥

ಶ್ರೀರಂಗನಾಥನಿಗೆ ಶ್ರೀರಂಗನಾಯಕಿಗೆ
ಕ್ಷೀರಾಬ್ಧಿಯಲಿತೋರ್ದ ಧನ್ವಂತರಿಗೆ
ನೀರು ಮಧ್ಯದಿ ಇರುವ ಜಂಬುಕೇಶ್ವರನಿಗೆ
ಭಾರಿ ಪುಣ್ಯದೆ ಕಾವೇರಿಗೆ ನಮಿಪೆ ॥ ೨೧ ॥

ಶಾರ್ಙ್ಗಧರ ಚಕ್ರಧರ ಕುಂಭೇಶ್ವರ ಅಂಬ
ಮಂಗಳನಾಯಕಿ ವಿಜಯೀಂದ್ರರಿಗೆ
ನಾಗೇಶ್ವರನಿಗೆ ವಿದ್ಯಪುರಿ ಶ್ರೀಶನಿಗೆ
ಭೃಗುಸುತಪತಿ ಶ್ರೀನಿವಾಸನಿಗೆ ನಮಿಪೆ ॥ ೨೨ ॥

ಪರಿಕಲ್ಲು ಎಂಬುವ ಗ್ರಾಮದಲಿ ನರಸಿಂಹ
ಶ್ರೀರಮಾಪತಿ ಇಹನು ಸರ್ವೇಷ್ಟದಾತ
ಪರಿಪರಿ ಭಕ್ತರ ಪೀಡೆಗಳ ಪರಿಹರಿಪ
ಶರಣಾದೆ ಶ್ರೀಲಕ್ಷ್ಮಿನರಸಿಂಹನಲ್ಲಿ || ೨೩ ||

ತಿರುಕೋಯಿಲೂರಲ್ಲಿ ಮೂರ್ಲೋಕ ಆಳಿದವನ
ಭಾರಿ ಆಲಯ ಉಂಟು ಶಿವಕುಮಾರರಿಗೂ
ಪಾತ್ರ ವಿಶಾಲವು ದಕ್ಷಿಣ ಪಿನಾಕಿನಿಯ
ತೀರದಲಿ ಶ್ರೀರಘೂತ್ತಮರು ಕುಳಿತಿಹರು || ೨೪ ||

ಪಿನಾಕಜಾ ಈ ಪಿನಾಕಿಯಲ್ಲಿಹನು
ಅನಿಮಿತ್ತ ಬಂಧು ಶ್ರೀಕೇಶವ ಸರ್ವೇಶ
ಸ್ನಾನ ಜಪದಾನಗಳು ಪುಣ್ಯಪ್ರದತತ್ತೀರ
ವನದಲ್ಲಿ ಶ್ರೀ ರಘೂತ್ತಮರ ವೃಂದಾವನ || ೨೫ ||

ಶ್ರೀಯುತ ತ್ರಿವಿಕ್ರಮ ವಿಶ್ವರೂಪಗೆ ನಮೋ
ಕಾತ್ಯಾಯನಿ ಶಿವಗೂ ಸ್ಕಂದಂವಲ್ಲೀಗೂ
ಕಾಯವಾಕ್ಮನದಿ ಟೀಕಾಭಾವಬೋಧರಿಗೂ
ಕಾಯಮನ ಶುದ್ಧಿಕರ ಪಿನಾಕಿನಿಗೂ ನಮಿಪೆ || ೨೬ ||

ತಿರುಕೋಯಿಲೂರಿಗೆ ಕ್ರೋಶತ್ರಯದೊಳಗೆವೇ
ವೀರ ಚೋಳಪುರದಲ್ಲಿ ಶ್ರೀ ಸತ್ಯನಾಥ
ತೀರ್ಥರು ಅಭಿನವ ಚಂದ್ರಿಕಾಕಾರರು
ಇರುತಿಹರು ವೃಂದಾವನದಲ್ಲಿ ವಂದೇ || ೨೭ ||

ತಿರುಕೋಯಿಲೂರಿಂದ ತಿರುವಣ್ಣಾಮಲೆಯೆಂಬ
ಅರುಣಾಚಲಕೆ ಪೋಗಿ ಅಲ್ಲಿ ರಾಜಿಸುವ
ಕರುಣಾಬ್ಧಿ ಗಿರಿಜಾರಮಣನ್ನ ವಂದಿಸಿ
ತಿರುಪತಿಗೆ ಹೊರಟರು ಗುರುಸಾರ್ವಭೌಮ || ೨೮ ||

ಹೇಮಗರ್ಭನ ತಾತ ಶ್ರೀಪತಿ ಜಗನ್ನಾಥ
ಅಮಲಗುಣಗಣಸಿಂಧು ಪ್ರಸನ್ನ ಶ್ರೀನಿವಾಸ
ರಾಮ ಹಯಮುಖವ್ಯಾಸನೃಹರಿಗೆ ಪ್ರಿಯತಮರೆ
ನಿಮ್ಮಲ್ಲಿ ಶರಣಾದೆ ಸತ್ಯಬೋಧಾರ್ಯ || ೨೯ ||

## ಅಧ್ಯಾಯ ೨

ಸತ್ಯಬೋಧಾರ್ಯರ ವೃತತಿಜಾಂಘ್ರಿಗಳಲ್ಲಿ
ಸತತ ಶರಣಾದೆ ನಾ ಹಿತದಿ ಪಾಲಿಪರು
ಪ್ರತತ ಭೂಮಾದಿ ಗುಣಸಿಂಧು ಪುರುಷೋತ್ತಮನ
ವಿತತ ಮನದಲಿ ಧ್ಯಾನಿಸಿ ಒಲಿಸಿಕೊಂಡ || ಪ ||

ವೇಲೂರು ಚಿತ್ತೂರು ಚಂದ್ರಗಿರಿ ಮಾರ್ಗದಲಿ
ಅಲ್ಲಲ್ಲಿ ಪ್ರಮುಖ ಭೂಪಾಲರ ಕೈಯಿಂದ
ಬಲು ಭಕ್ತಿಯುತ ಪೂಜೆ ಮರ್ಯಾದೆ ಕೊಂಡು
ವ್ಯಾಳಗಿರಿ ವೇಂಕಟನ ತಿರುಪತಿ ಸೇರಿದರು || ೧ ||

ತಿರುಪತಿಯಲಿ ಹನುಮದಾಧಿ ಲಕ್ಷ್ಮಣ ಸೇವ್ಯ
ಶ್ರೀರಾಮಸೀತಾ ಸಮೇತನಿಗೆ ನಮಿಪೆ
ಉರಗೇಶಶಯ್ಯ ಶ್ರೀಗೋವಿಂದರಾಜನಿಗು
ಶಿರಬಾಗುವೆ ಶ್ರೀಲಕ್ಷ್ಮೀಗೂ ಸತತ || ೨ ||

ಒಂದು ಗಾವುದ ದೂರದೊಳಗೇವೇ ಇರುತಿಹುದು
ಪದ್ಮಸರೋವರವು ತತ್ತೀರದಲ್ಲಿ
ವೇದವಿಗ್ರಹಘೃಣಿ ಆದಿತ್ಯ ಸೂರ್ಯನು
ನಿಂತಿಹನು ಸರ್ವೇಷ್ಟ ಶ್ರೀದವೃಷ್ಟಿದನು || ೩ ||

ಸಮೀಪದಲಿ ದೊಡ್ಡ ಆಲಯವಿಹುದಲ್ಲಿ
ಬೊಮ್ಮಾದಿ ಸುಮನ ಸಾರ್ಜಿತ ಕೃಷ್ಣ ಅಣ್ಣ
ರಾಮನ ಸಹ ಕುಳಿತು ವಂದಿಸುವ ಸಜ್ಜನರ
ಕ್ಷೇಮಲಾಭವ ಸದಾ ಪಾಲಿಸುತಿಹನು || ೪ ||

ದಕ್ಷಪಾರ್ಶ್ವದ ಗುಡಿಯಲ್ಲಿ ಸುಂದರರಾಜ
ಲಕ್ಷ್ಮೀಸಮೇತನು ಕಾರುಣ್ಯ ಶರಧಿ
ಪಕ್ಷ್ಮಗಳು ಅಕ್ಷಿಗಳ ರಕ್ಷಿಸುವ ತೆರದಲ್ಲಿ
ವಿಷ್ಣು ಭಕ್ತರ ಸದಾ ಕಾಯುತಿಹನು || ೫ ||

ಕೃಷ್ಣಾಲಯ ವಾಮಪಾರ್ಶ್ವ ಮಂದಿರದಲ್ಲಿ
ವನಜ ಆಸನದಲ್ಲಿ ಶ್ರೀಪದ್ಮಾವತಿಯು
ದೀನ ಕರುಣಾಕರಿಯ ವರ ಅಭಯ ನೀಡುತ್ತ
ಶ್ರೀನಿವಾಸನ ಬದಿಯಲ್ಲಿ ಕುಳಿತಿಹಳು || ೬ ||

ದ್ವಾದಶಾಕ್ಷರ ಕಮಲ ವಾಸಿನಿ ಮಂತ್ರಪ್ರತಿ
ಪಾದ್ಯಳು ಪದ್ಮಾವತಿ ಕಮಲವಾಸಿನಿಯು
ಪದ್ಮಲೋಚನೆ ಸರ್ವಾಲಂಕಾರ ಸಂಪನ್ನೆ
ಸದಾ ಯಮ್ಮ ಪಾಲಿಸುವಳಿಗೆ ನಮೋ ಎಂಬೆ || ೭ ||

ವೇಂಕಟಾಚಲದ ಅಡಿ ವಾರದಲಿ ಇರುತಿದೆ
ಅಕಳಂಕ ಸುಪವಿತ್ರ ಕಪಿಲತೀರ್ಥ
ಅಂಗ ಆಕಾರದಲಿ ಕಪಿಲೇಶ್ವರ ಇಹನು
ಬಾಗುವೆ ಶಿರ ಶಿವಗು ಉಮಾಮಹೇಶ್ವರಿಗೂ || ೮ ||

ಕಪಿಲೇಶ್ವರಾನುಗ್ರಹದಿಂದ ಗಿರಿ ಏರಿ
ಗೋಪುರಾಲಯದಲ್ಲಿ ನೃಸಿಂಹನ ನಮಿಸಿ
ಶ್ರೀಪ ವರಾಹ ವೆಂಕಟನ ಕಾಣಿಸುವಂತ
ಆ ಭೇಟಿ ಹನುಮನಿಗೆ ಶರಣು ಶರಣೆಂಬೆ || ೯ ||

ಸ್ವಾಮಿ ವೆಂಕಟನ ಆಲಯದ ಗೋಪುರ ಕಂಡು
ಸ್ಮರಿಸಿದ ಮಾತ್ರದಲೆ ಪಾಪ ನೀಗಿಸುವ
ಸ್ವಾಮಿ ತೀರ್ಥಕು ಭೂವರಾಹ ಕರುಣಾಬ್ಧಿಗೂ
ನಮಿಸುವೆ ಅಶ್ವತ್ಥನಾರಾಯಣಗು ॥ ೧೦ ॥

ಕಪಿಲೇಶ್ವರರಾನುಗ್ರಹದಿ ಹನುಮಂತನ
ಆ ಪವನಜನ ದಯದಿ ಭೂಧರಾ ವರಾಹನ
ಪುಷ್ಪಭವ ಪೂಜಿತ ಶ್ರೀ ಶ್ರೀನಿವಾಸನ
ಶ್ರೀಪದ್ಮ ಪದಯುಗದಿ ಶರಣು ಶರಣಾದೆ ॥ ೧೧ ॥

ಶ್ರೀವಕ್ಷ ವೇಂಕಟೇಶನ್ನ ಧ್ಯಾನಿಸಿ ನಮಿಪೆ
ದೇವ ದೇವ ಶಿಖಾಮಣಿ ಕೃಪಾನಿಧಿ ಸುವೃಂದ
ನವರತ್ನಖಚಿತ ಆಭರಣ ಕಿರೀಟಿಯು
ಶಿವದ ವರ ಅಭಯ ಕರಕಟಿ ಚಕ್ರಶಂಖಿ ॥ ೧೨ ॥

ಭಕ್ತವತ್ಸಲ ದಯಾನಿಧಿ ಶ್ರೀನಿವಾಸನ್ನ
ಸತ್ಯಬೋಧತೀರ್ಥಾರ್ಯರು ವಂದಿಸಿ ಸ್ತುತಿಸಿ
ಆ ದೇವಸ್ಥಾನದಲಿ ಮರ್ಯಾದೆಗಳ್ ಕೊಂಡು
ಪದುಮ ಸರೋವರಾಲಯಗಳ ಐದಿದರು ॥ ೧೩ ॥

ವೆಂಕಟಗಿರಿಯಿಂದ ಕರ್ನಾಲು ಗದ್ವಾಲ
ಪೋಗಿ ಸತ್ತತ್ವ ಸಿದ್ಧಾಂತವ ಬೋಧಿಸಿ
ಭಕುತರಿಗೆ ದರ್ಶನ ಉಪದೇಶ ಕೊಟ್ಟರು
ಮಾರ್ಗದಲಿ ಹನುಮಂತ ಕ್ಷೇತ್ರ ಇಹುದು ॥ ೧೪ ॥

ಕ್ಷೇತ್ರ ಗಂಡಿಗ್ರಾಮ ತತ್ರಸ್ಥ ಹನುಮನಿಗೆ
ಶರಣೆಂಬೆ ಸ್ಮರಿಸಲು ಬುದ್ಧಿರ್ಬಲ ಯಶಸ್ಸು
ಧೈರ್ಯವು ನಿರ್ಭಯತ್ವವು ಅರೋಗತವು
ದೊರೆಯುವುದು ನಿಶ್ಚಯ ಆಜಾಡ್ಯ ವಾಕ್ಪಟುತ್ವ ॥ ೧೫ ॥

ಹೇಮಗರ್ಭನ ತಾತ ಶ್ರೀಪತಿ ಜಗನ್ನಾಥ
ಅಮಲ ಗುಣಗಣಸಿಂಧು ಪ್ರಸನ್ನ ಶ್ರೀನಿವಾಸ
ರಾಮ ಹಯಮುಖವ್ಯಾಸ ನೃಹರಿಗೆ ಪ್ರಿಯತಮರೆ
ನಿಮ್ಮಲ್ಲಿ ಶರಣಾದೆ ಸತ್ಯಬೋಧಾರ್ಯ || ೧೬ ||

## ಅಧ್ಯಾಯ ೩

ಸತ್ಯಬೋಧಾರ್ಯ ವ್ರತತಿಜಾಂಘ್ರಿಗಳಲ್ಲಿ
ಸತತ ಶರಣಾದೆ ನಾ ಹಿತದಿ ಪಾಲಿಪರು
ಪ್ರತತ ಭೂಮಾದಿ ಗುಣಸಿಂಧು ಪುರುಷೋತ್ತಮನ
ವಿತತ ಮನದಲಿ ಧ್ಯಾನಿಸಿ ಒಲಿಸಿಕೊಂಡ || ಪ ||

ಗ್ರಾಮ ಪಟ್ಟಣ ನಗರ ಪ್ರಮುಖರು ಅಲ್ಲಲ್ಲಿ
ಶ್ರೀಮಠಕ್ಕೆ ಆಹ್ವಾನ ಸ್ವಾಗತ ಕೊಟ್ಟು
ಸ್ವಾಮಿಗಳ ಆದರದಿ ಸೇವಿಸಿ ಪೂಜೆಯ
ಸಮ್ಮುದದಿ ವೈಭವದಿ ಮಾಡಿಸಿದರು || ೧ ||

ಗದ್ವಾಲ ಕಡೆಯಿಂದ ಹೈದರಾಬಾದು
ಗೋದಾವರಿ ರಾಯಚೂರು ಮಂತ್ರಾಲಯ
ಇಂಥಾ ಹರಿಗುರು ಕ್ಷೇತ್ರಗಳಿಗೆ ಪೋಗಿ
ಬಂದರು ಸವಣೂರು ರಾಜಧಾನಿಗೆ || ೨ ||

ಸವಣೂರ ರಾಜನು ಒಳ್ಳೆ ನವಾಬನು
ದಿವಾನ್ ಎಂಬುವ ಮುಖ್ಯ ಮಂತ್ರಿ
ಸಾತ್ವಿಕ ದ್ವಿಜವರ್ಯ ಖಂಡೇರಾಯನು
ಆಹ್ವಾನ ಸ್ವಾಗತ ಗುರುಗಳಿಗರ್ಪಿಸಿದ || ೩ ||

ತೆಂಗು ಮಾವು ಬಾಳೆ ಕಂಬ ತೋರಣಗಳು
ಮಂಗಳವಾದ್ಯಗಳು ವೇದಘೋಷ
ತಿಂಗಳ ತಾರೆಗಳ ಮಧ್ಯ ಜ್ವಲಿಪಂತೆ ರಾ-
ಜಾಂಗಣದಿ ಜ್ವಲಿಸಿದರು ಗುರುಸಾರ್ವಭೌಮ || ೪ ||

ನವಾಬನ ಮತ್ತು ಖಂಡೇರಾಯನ ಪುಣ್ಯ
ಸವಣೂರ ಸಜ್ಜನರ ಪುಣ್ಯ ಏನೆಂಬ
ದೇವತಾಂಶರು ಜ್ಞಾನಿವರರು ಈ ಗುರುಗಳು
ಸವಣೂರಲ್ಲಿ ಚಾತುರ್ಮಾಸಕ್ಕಿರಿಸಿದರು ॥ ೫ ॥

ಹರಿಭಕ್ತಿ ಗುರುಭಕ್ತಿ ಸಜ್ಜನರು ಬೆಳೆಸುತಿರೆ
ಎರಡೊಂದು ದುರ್ಜನರು ಹೊಟ್ಟೆಕಿಚ್ಚಿನಲ್ಲಿ
ದುರುಳತನದಲಿ ಪೀಠ ಅಪಹರಿಸಲು ನೆನೆದು
ಗರಳ ಹಾಕಿಸಿದರು ರಹಸ್ಯದಿ ಪಾಯಸದೊಳ್ ॥ ೬ ॥

ಏಕಾಗ್ರಚಿತ್ತದಲಿ ಪ್ರತಿಮಾಸ್ಥ ಹರಿಯನ್ನು
ಪಾಕಪದಾರ್ಥಸ್ಥ ಶ್ರೀಯಃಪತಿಯನ್ನು
ಐಕ್ಯಚಿಂತನಪರರಾಗಿ ಗುರುವರ್ಯರು
ಅಕಳಂಕ ಮಹಿಮ ಶ್ರೀಹರಿಗೆ ನೈವೇದ್ಯ ಮಾಡಿದರು ॥ ೭ ॥

ತತ್ತತ್ ಪದಾರ್ಥಾಭಿಮಾನಿಗಳ ತಿಳಿಯುತ್ತ
ತತ್ರ ತತ್ರಸ್ಥಿತ ವಿಷ್ಣುರೂಪ ವಿಶೇಷ
ಚಿಂತಿಸುತಲಿದ್ದ ಕಾರಣದಿ ವಿಷಮಿಗಳ
ಕೃತ್ಯವು ಗಮನಕ್ಕೆ ಬರಲಿಲ್ಲ ಆಗ ॥ ೮ ॥

ಪ್ರೋಚ್ಚಗುಣನಿಧಿ ಅನಘ ಅಪ್ರಾಕೃತ ಹರಿಯ
ಅಚಲ ಪ್ರಾಕೃತ ಪ್ರತೀಕದ ಕಂಠದಲ್ಲಿ
ಪಚ್ಚೆವರ್ಣದಿ ರೇಖಾ ವಿಷಸೂಚನೆ ಕಂಡು
ಎಚ್ಚರಿತು ಅಡಿಗೆಯ ಪರೀಕ್ಷೆಗೈಸಿದರು ॥ ೯ ॥

ವಿಷವು ಪರಮಾನ್ನದಲಿ ಬೆರೆದಿರುವುದು ಕಂಡು
ಶಿಷ್ಯರು ಸುಜನರು ಉಣಬೇಡ ಎಂದರು
ಶೇಷಶಾಯಿಗೆ ನಿವೇದಿತ ಪ್ರಸಾದವು ಎಂದು
ವೃಷಾಕಪಿಯ ಸ್ಮರಿಸುತ್ತ ಉಂಡರು ಗುರುವು ॥ ೧೦ ॥

ಸ್ಮರಣಾತ್ ಸರ್ವಪಾಪಾಘ್ನಖಾದ್ರೂಜಾದಿ
ಸರ್ವ ವಿಷಹರ ಶ್ರೀಹರಿಯು ಒಲಿದಿರುವ
ಗುರು ಸತ್ಯಬೋಧರಿಗೆ ವಿಷದಿಂದ ಬಾಧೆಯು
ಬರಲಿಲ್ಲ ಆದರೂ ವೈದ್ಯ ಕರೆಸಿದರು ॥ ೧೧ ॥

ನರಲೋಕದಲಿ ರೋಗಿಗಳಿಗೂ ವಿಷಗ್ರಸ್ತರಿಗೂ
ಮಂತ್ರಮಣಿ ಔಷಧ ಪಥ್ಯ ಉಪಾಯ
ಪರಿಹಾರಕ್ಕಾಗಿ ಮಾಡುವುದುಂಟು ಆ ರೀತಿ
ಗುರುಗಳು ಪಥ್ಯ ಮಾಡಲಿಕೆ ಒಪ್ಪಿದರು ॥ ೧೨ ॥

ಪಥ್ಯವು ನಿದ್ರೆ ಮಾಡಕೂಡದೆನಲು
ಅದರಂತೆ ರಾತ್ರಿ ಜಾಗರದಲ್ಲಿ ಇರುತ
ರಾತ್ರಿಯೇ ಪೂಜೆ ನೈವೇದ್ಯಾದಿಗಳಾಚರಿಸಿ
ಪಥ್ಯ ಆಚರಿಸಿದರು ವಿಹಿತಕಾಲಕ್ಕೆ ॥ ೧೩ ॥

ಮಂದಮತಿಯಲಿ ಕೆಲವು ಜನರು ಇದು ಏನು
ರಾತ್ರಿ ನೈವೇದ್ಯ ಭೋಜನ ಅವೇಳೆಯಲಿ
ಎಂದು ಗುಸುಗುಸು ಮಾತಾಡಿ ನಗಲಿಕ್ಕೆ
ಅತಿಶಯ ಭಾವಿಸಿತು ರಾತ್ರಿ ವೇಳೆಯಲಿ ॥ ೧೪ ॥

ಆಕ್ಷೇಪಿಸಿದವರನ್ನು ರಾತ್ರಿ ಗುರುಗಳ್ ಕರೆದು
ನಕ್ಷತ್ರಮಾನದಿ ವೇಳೆ ಏನು ಈಗ
ಈಕ್ಷಿಸಿನಭಮಂಡಲ ಎಂದು ಹೇಳಿ
ಲಕ್ಷ್ಮೀಶ ಶಿಂಶುಮಾರನ್ನ ಸ್ಮರಿಸಿದರು ॥ ೧೫ ॥

ಅಂಗಳ ಬಯಲಿಗೆ ಹೋಗಿ ಆ ಜನರು
ಗಗನವ ಕಣ್ಣೆತ್ತಿ ನೋಡಲು ಅಲ್ಲಿ
ಧಗಿಧಗಿಪ ಸೂರ್ಯನ್ನ ಕಂಡು ಚಕಿತರು ಆಗಿ
ಶ್ರೀಗಳ ಸನ್ನಮಿಸಿ ಕ್ಷಮಿಸೆ ಬೇಡಿದರು ॥ ೧೬ ॥

ಮಹಿಮೆಗಳ್ ಅನೇಕದಲಿ ಇದು ಒಂದು ಸಾಲದೆ
ಮಹಂತ ಈ ಗುರುಗಳ ಪ್ರಭಾವ ತಿಳಿವುದಕೆ
ಅಹಿಭೂಷಣ ಅಹಿಪ ವಿಷವಾಯು ಬ್ರಹ್ಮನುತ
ಮಹಿಶಿರಿ ಪತಿಯ ಅನುಗ್ರಹ ಪೂರ್ಣರಿವರು ॥ ೧೭ ॥

ಹೇಮಗರ್ಭನ ತಾತ ಶ್ರೀಪತಿ ಜಗನ್ನಾಥ
ಅಮಲಗುಣಗಣಸಿಂಧು ಶ್ರೀಪ್ರಸನ್ನ ಶ್ರೀನಿವಾಸ
ರಾಮ ಹಯಮುಖವ್ಯಾಸ ನೃಹರಿಗೆ ಪ್ರಿಯತಮರೆ
ನಿಮ್ಮಲ್ಲಿ ಶರಣಾದೆ ಸತ್ಯಬೋಧಾರ್ಯ ॥ ೧೮ ॥

## ಅಧ್ಯಾಯ ೪

ಸತ್ಯಬೋಧಾರ್ಯರ ವೃತತಿಜಾಂಘ್ರಿಗಳಲ್ಲಿ
ಸತತ ಶರಣಾದೆ ನಾ ಹಿತದಿ ಪಾಲಿಪರು
ಪತತ ಭೂಮಾದಿ ಗುಣ ಸಿಂಧು ಪುರುಷೋತ್ತಮನ
ವಿತತ ಮನದಲಿ ಧ್ಯಾನಿಸಿ ಒಲಿಸಿಕೊಂಡ ॥ ಪ ॥

ಸತ್ಯಬೋಧಾರ್ಯರು ಭಾಗೀರಥಿ ಕುರಿತು
ಯಾತ್ರೆ ಮಾಡಲು ಮನದಿ ಯೋಚಿಸುತ್ತಾಗ
ಇದ್ದ ಕಡೆಯಲೆ ಗಂಗೆ ಬಂದು ಒದಗುವಳು
ಎಂದು ಸ್ವಪ್ನವು ಆಯಿತು ಆಂದು ರಾತ್ರಿಯಲಿ ॥ ೧ ॥

ಶ್ರೀಮಠಕ್ಕೆ ಅರ್ಧ ಗಾವುದ ದೂರ ಇರುವಂಥ
ಭೂಮಿಯಲಿ ಕೃಪಿಕೂಪ ಬಹು ದೊಡ್ಡದಲ್ಲಿ
ಸಮೀಪಸ್ಥ ಔದುಂಬರ ತರು ಮೂಲದಿಂ
ಅಮರ ತಟನೀ ಬರುವ ವೇಳೆಯು ತಿಳಿಯಿತು ॥ ೨ ॥

ಶ್ರೀಗಳು ನವಾಬನಿಗೂ ಖಂಡೇರಾಯನಿಗು
ನಗರ ಜನರಿಗು ತಿಳಿಸಿ ಆ ಸ್ಥಳಕ್ಕೆ ಪೋಗೆ
ಗಂಗಾವತರಣವು ಆಯಿತು ಸೂಚಿತ ವೇಳೆ
ಕಂಗೊಳಿಸುವ ಭಾಗೀರಥಿ ಧಾರಾ ಸುರಿದು ॥ ೩ ॥

ತ್ರಿವಿಕ್ರಮ ಸುಪಾದಜಾ ತ್ರಿಜಗತ್ ಪಾವನಿಗಂಗಾ
ತ್ರಿದಶೇಶ್ವರಿ ನಳಿನಿ ಸೀತಾನಮಸ್ತೆ
ತ್ರಾಹಿ ಜಾಹ್ನವಿ ಭಾಗೀರಥೀ ನಮೋ ಭೋಗವತಿ
ತ್ರಿಪಥಗಾಮಿನಿ ಪಾಹಿ ಮಾಲತಿ ನಂದಿನಿ || ೪ ||

ನವಾಬನು ಮಂತ್ರಿಯು ನೆರೆದಿದ್ದ ಜನರೆಲ್ಲ
ದೇವ ತಟನಿ ಧಾರಾ ಸುರಿದದ್ದು ನೋಡಿ
ದೈವೀಕ ಈ ಮಹಿಮೆ ಕೊಂಡಾಡಿ ಸಸ್ನಾನ ಜಪ
ಸೇವೆ ದಾನಾದಿಗಳ ಮಾಡಿದರು ಮುದದಿ || ೫ ||

ವಿಷ್ಣುತೀರ್ಥ ಎಂದು ನಾಮ ಈ ತೀರ್ಥಕ್ಕೆ
ವಿಷ್ಣು ಭಕ್ತಾಗ್ರಣಿ ಸದಾಶಿವನ ಲಿಂಗ
ವಿಷ್ಣುತೀರ್ಥದ ದಡದಿ ಇಹುದು ಶರಣೆಂಬೆ
ವಿಷ್ಣ್ವಂಘ್ರಿ ಜಾತೆಗೂ ಉಮೇಶನಿಗೂ ಶ್ರೀಶಗೂ || ೬ ||

ಶ್ರೀ ಸತ್ಯಬೋಧರು ಗಂಗೆಯ ತರಿಸಿದ್ದು
ಶ್ರೀಸತ್ಯಬೋಧರ ಬಹು ಇಂಥ ಮಹಿಮೆ
ವಸುಮತಿಯಲಿ ಹರಡಿ ದೇಶ ದೇಶಗಳಿಂದ
ಭೂಸುರರು ಸಜ್ಜನರು ಬಂದು ಸೇವಿಪರು || ೭ ||

ಪಟ್ಟಣದ ಮಧ್ಯದಿ ನವಾಬು ಕೊಡಿಸಿದ ಸ್ಥಳದಿ
ಕಟ್ಟಡವು ಶ್ರೀಮಠ ವಿಸ್ತಾರವಾದ್ದು
ಮಠದಲ್ಲೇ ಉಂಟೊಂದು ಸೋಪಾನ ಭಾವಿಯು
ಕಟ್ಟೆಯಲಿ ಶಿವಲಿಂಗ ಬಾವಿಯಲಿ ಗಂಗಾ || ೮ ||

ಭೃಗು ಅಂಶ ವಿಜಯದಾಸಾರ್ಯರ ಪ್ರಭಾವವು
ಏಕದಂತಾಂಶ ಗೋಪಾಲದಾಸಾರ್ಯರ ಪ್ರಭಾವ
ಭಾಗಣ್ಣಾನುಜರು ಈರ್ವರು ಪ್ರಭಾವವ
ಶ್ರೀಗುರುಗಳು ಮೆಚ್ಚಿ ಮಾನ್ಯ ಮಾಡಿಹರು || ೯ ||

ವಿದ್ವತ್ಸಭೆಯಲಿ ಗೋಪಾಲದಾಸಾರ್ಯರು
ಆ ದಾಸವರ್ಯರ ಅನುಜರು ಈರ್ವರು
ದೇವತಾಂಶದವರು ಅಪರೋಕ್ಷ ಪ್ರಚುರರು
ಎಂದು ಜನರಿಗೆ ನಿದರ್ಶನ ತೋರಿಸಿದರು || ೧೦ ||

ವಿಠ್ಠಲ ನೃಹರಿವ್ಯಾಸ ಶ್ರೀಸಹ ವೇಂಕಟರಾಮ
ಘೋಟಕಾಸ್ಯ ಮಧ್ವೇಶನ್ನರಾಧಿಪಂಥ
ಮಠದಲ್ಲಿ ಜಗನ್ನಾಥದಾಸಾರ್ಯರ ಸೇವೆ
ಕೊಂಡು ಬಹು ಪ್ರೀತಿಯಲಿ ಅನುಗ್ರಹ ಮಾಡಿಹರು || ೧೧ ||

ಅಮಲ ವೈದಿಕ ತತ್ವ ಮಧ್ವಸಿದ್ಧಾಂತವ
ಭೂಮಿ ದೇವರಿಗೆ ಬೋಧಿಸಿ ಸರ್ವಜನರ್ಗು
ಕ್ಷೇಮ ಒದಗಿಸಿ ರಮಾಕಾಂತನ್ನ ಸ್ಮರಿಸುತ
ಈ ಮಹಿಯೋಳ್ ಸರ್ವಜನ ಪ್ರಿಯತಮರಾಗಿಹರು || ೧೨ ||

ಒಳ್ಳೆ ರೀತಿಯಲಿ ಜತ್ವಾರಿ ವತ್ಸರ ಮಠ
ಆಳಿ ಶಾಲಿಶಕ ಹದಿನೇಳ್ ನೂರೈದು
ಫಾಲ್ಗುಣ ಕೃಷ್ಣ ಪ್ರತಿಪದ ದಿನ ಹರಿಧ್ಯಾನ-
ದಲ್ಲಿ ಕುಳಿತರು ಲೋಕ ಚಟುವಟಿಕೆ ತೊರೆದು || ೧೩ ||

ಸತ್ಯಬೋಧರ ವೃಂದಾವನದಿ ಅವರೊಳಿಹನು
ಸತ್ಯಬೋಧಾಹ್ವಯನು ಶ್ರೀಸಹ ಹಯಾಸ್ಯ
ವಾತಸೇವಿತ ರಾಮಕೃಷ್ಣನೃಹರಿ ವ್ಯಾಸ
ಭೃತ್ಯವತ್ಸರ ವಾಮದೇವನುತನಾಗಿ || ೧೪ ||

ದರ್ಶನ ಪ್ರದಕ್ಷಣೆ ನಮನ ಪಾದೋದಕ
ಸಂಸ್ಮೃತಿ ಸುಚರಿತ್ರೆ ಪಾರಾಯಣ
ಸಚ್ಛಾಸ್ತ್ರ ಪ್ರವಚನ ಜಪತಪದಾನಾದಿಗಳು
ವಾಂಛಿತಪ್ರದ ಸರ್ವ ಅಘಪೀಡಹರವು || ೧೫ ||

ಪುತ್ರಧನ ಆರೋಗ್ಯ ಆಯುಷ್ಯ ಮಾಂಗಲ್ಯ
ತಾಪತ್ರಯ ಪರಿಹಾರ ರೋಗ ನಿವೃತ್ತಿ
ಕ್ಷಿಪ್ರ ಲಭಿಸುವವು ಹರಿಗುರುಗಳ ದಯದಿಂದ
ಸುಶ್ರವಣ ಪಠಣ ಈ ಗ್ರಂಥ ಮಾಳ್ಪರಿಗೆ || ೧೬ ||

ಸತ್ಯಸಂಧಾರ್ಯರು ಮಹಾ ಮಹಿಮ ಶಿಷ್ಯರು
ಸತ್ಯಬೋಧಾರ್ಯರ ಆರಾಧನ ಭಕ್ತಿ
ಉತ್ಸಾಹದಿ ಮಾಡಿದರು ಅದ್ಯಾಪಿ ಸಹಸ್ರಾರು
ಭಕ್ತರು ಸೇವಿಸುತಿಹರು ಪ್ರೇಮದಲಿ || ೧೭ ||

ಹೇಮಗರ್ಭನ ತಾತ ಶ್ರೀಪತಿ ಜಗನ್ನಾಥ
ಅಮಲಗುಣಗಣಸಿಂಧು ಶ್ರೀಪ್ರಸನ್ನ ಶ್ರೀನಿವಾಸ
ರಾಮ ಹಯಮುಖವ್ಯಾಸನೃಹರಿಗೆ ಪ್ರಿಯತಮರೆ
ನಿಮ್ಮಲ್ಲಿ ಶರಣಾದೆ ಸತ್ಯಬೋಧಾರ್ಯ || ೧೮ ||

ಇತಿ ಶ್ರೀ ಪ್ರಸನ್ನ ಶ್ರೀನಿವಾಸದಾಸಾರ್ಯ ವಿರಚಿತ
ಶ್ರೀ ಸತ್ಯಬೋಧ ಚರಿತ್ರೆ ಸಂಪೂರ್ಣಂ

೩೮

# ಶ್ರೀ ಸತ್ಯಬೋಧ ಶ್ರೀಪಾದಂಗಳವರ ಚರಿತ್ರೆ

(ಪತಿಯ ಪಾದಕ್ಕೆರಗಿ ಎಂಬಂತೆ)

**ಶ್ರೀ ರಮಣಗೊಂದಿಸಿ ಭಾರತೀಶಗೆ ನಮಿಸಿ ಆ**
**ಋಷೀಶ್ವರರ ಸಂಸ್ತುತಿಸಿ**

ಸೂರಿ ಸತ್ಯಬೋಧ ಚಾರುಚರಣರುದಾರ ಚಾರಿತ್ರ್ಯವನು ವರ್ಣಿಪೆ
|| ೧ ||

ವಿಘ್ನರಾಜನ ಪಾದಯುಗ್ಮಕ್ಕೆ ವಂದಿಸಿ ಬಗ್ಗಿ ದೈನ್ಯದಲಿ ಬೇಡುವೆನು
ವಿಘ್ನವ ಕಳೆದು ವೈರಾಗ್ಯ ಭಕುತಿ ಜ್ಞಾನ ಭಾಗ್ಯವ ಕರುಣಿಸಲೆಂದು
|| ೨ ||

ಅತ್ಯಲ್ಪವಾದೆನ್ನ ಶಕ್ತಿಗೆ ಮೀರೀದಿ ಕೃತ್ಯವ ಗುರುಗಳ ಕೃಪೆಯೇ
ಪೂರ್ತಿಗೊಳಿಸಲೆಂದು ಪ್ರಾರ್ಥಿಸಿ ಅವರಿಗೆ ಭಕ್ತಿಯಿಂದಲೀ
ನಮಿಸುವೆನು || ೩ ||

ಸತ್ಯಪ್ರಿಯರ ಪ್ರಿಯ ಪುತ್ರರೆಂದೆನಿಸಿ ಧಾರಿತ್ರಿಯೊಳಗೆ ಅವತರಿಸಿ
ಶಾಸ್ತ್ರ ರಾಜ್ಯ ಚಕವರ್ತಿಗಳಾದ ಶ್ರೀ ಸತ್ಯಬೋಧರಿಗೆ ವಂದಿಪೆನು
|| ೪ ||

ಹರಿಯಾರ್ಯನೆಂಬ ಭೂಸುರನು ರಾಯಚೂರಪುರದಿ ಗಾರ್ಹಸ್ಥ್ಯ
ವ್ರತವನ್ನು ತರುಣಿಯಿಂದೊಡಗೂಡಿ ಪರಮ ಭಕುತಿಯಿಂದ
ಪರಿಪಾಲಿಸುತಿರುತಿರ್ದಾ || ೫ ||

ಈರೆರಡು ಇವಗೆ ಕುಮಾರರಿದ್ದರು ವಂಶೋದ್ಧಾರಕ್ಕೆ ಕಾರಣನಾದ
ಬೇರೆನಂದನನನ್ನು ಹಾರೈಸಿ ರಾಮನನ್ನಾರಾಧಿಸಿದನೇಕ ಮನದಿ
|| ೬ ||

ಭಾಮಿನೀಸಹಿತಾಗಿ ಭೂಮಿಸುರನು ಗೈದ ನೇಮನಿಷ್ಠೆಗಳಿಗೆ ಒಲಿದು
ಸ್ವಾಮಿಯು ಈತಗೆ ಕಾಮಿತವರವನ್ನು ಪ್ರೇಮದಿ ದಯಪಾಲಿಸಿದನು
|| ೭ ||

ಒಡೆಯ ರಂಗನಾಥನಡಿಗಳ ದಯದಿಂದ ಕಡು ಶುಭಮುಹೂರ್ತದಲ್ಲಿ
ಪೊಡವಿದೇವನ ಸಾಧ್ವಿ ಮಡದಿ ಸಂತೋಷದಿ ಪಡೆದಳು
ಪುತ್ರರತ್ನವನು || ೮ ||

(ವಚನ) ಸಿರಿ ರಾಮಚಂದ್ರಮನ ಕರುಣಾರಸಾಮೃತದ ಪರಿಪೂರ್ಣ
ಸನ್ನಿಧಿಗೆ ಪರಮಭಾಜನನಾದ ತರಳ ರತ್ನನ ಮನೋಹರವಾದ
ಮುಖ ನೋಡಿ ಹರಿಯಾರ್ಯ ತಾ ಹರುಷಭರಿತನಾಗಿ
ಸಿರಿರಂಗನಾಥನ ಪರಮೋಪಕಾರವನು ಮರೆಯದಲೆ
ಹೃದಯದಲಿ ಸ್ಮರಿಸುತ್ತ ಭಕುತಿಯಲಿ ಕರೆಸಿ ದೈವಜ್ಞ
ಭೂಸುರರನ್ನು ಕೇಳಿದನು ವರಕುಮಾರನ
ಭಾವಿಚರಿತಾಮೃತವನು.

(ಬೇಗ ಬಾರೋ ಬೇಗ ಬಾರೋ ಎಂಬಂತೆ)

ಜಾತಕವನು ನೋಡಿ ಜೋತಿಷ್ಯಬುಧರು
ತಾತಗೆ ಸಂತೋಷಮಾತು ಪೇಳಿದರು ॥ ೧ ॥
ಪುಣ್ಯವಂತನೆ ಕೇಳು ನಿನ್ನ ಈ ಮಗನು
ಸಣ್ಣ ಯೋಗ್ಯತೆಯಲ್ಲ ಮಾನ್ಯ ಮುನಿವರನು ॥ ೨ ॥
ನಕ್ಷತ್ರ ಗ್ರಹಗಳು ಉಚ್ಚವಾಗಿಹವು
ವೀಕ್ಷಿಸೆ ದೇವಾಂಶ ಲಕ್ಷಣಗಳಿಹವು ॥ ೩ ॥
ಬಾಲನ ಭಾಗ್ಯವ ಪೇಳಲೇನಿವನು ಮೂಲರಾಮನ
ಬಹುಕಾಲ ಪೂಜಿಪನು ॥ ೪ ॥
ದುರ್ಮತಗಳಿಗೆಲ್ಲ ನಿರ್ಮೂಲಕರನು
ಧರ್ಮಸಾಮ್ರಾಜ್ಯಕ್ಕೆ ಸಾಮ್ರಾಟನಹನು ॥ ೫ ॥
ಚಂಡ ಮಾಯಾಮತವ ಖಂಡಿಪ ಭಾನು
ಕೊಂಡಾಡುವರಿಗೆ ಅಖಂಡಸುರಧೇನು ॥ ೬ ॥
ವಿಷವ ಜೀರ್ಣಿಸಿ ಅರ್ಧ ನಿಷೆಯಲ್ಲಿ ಬಿಸಲು
ಹಸನಾಗಿ ತೋರುವ ಅಸದೃಶನಹನು ॥ ೭ ॥
ಗಂಗೆಯೀತನಿಗೊಲಿದು ಟೊಂಗೆಯಿಂದಿಳಿದು
ಮಂಗಳ ಮಹಿಮಳು ಕಂಗೊಳಿಸುವಳು ॥ ೮ ॥
ಗುಡ್ಡದಂತಹ ಪಾಪ ಜಿಡ್ಡು ಬಿಡಿಸುವನು
ಗುಡ್ಡದ ರಂಗನ ದೊಡ್ಡ ಸೇವಕನು ॥ ೯ ॥

(ವಚನ) ಕುವರನುಜ್ವಲ ಭವಿಷ್ಯವನು ಈ ರೀತಿಯಲಿ ಕವಿವರರು ಕೊಂಡಾಡುತಿರಲು ಆಶ್ಚರ್ಯದಲೀ ಕಿವಿಗೊಟ್ಟು ಹರಿಯಾರ್ಯ ತವಕದಿ ಕೇಳುತಲಿ ಸವಿಯಾದ ಸೌಖ್ಯಾಂಬುಧಿಯೊಳು ಮುಳುಗಿದ ಅವನಿಜಾಪತಿ ಮೂಲರಾಮನನು ಪೂಜಿಸಲು ಅವನೀತಲಕೆ ಬಂದ ಮುನಿಚಂದ್ರನಿವನೆಂದು ಇವಗೆ ಶುಭನಾಮಕರಣವ ಮಾಡಬೇಕೆಂದು ವಿವಿಧ ಭಾಂಧವ ಬಂಧುಗಳ ಕರೆಸಿದ.

(ಕೋಲು ಕೋಲೆನ್ನ ಕೋಲೆ ಎಂಬಂತೆ)

ಅಂದು ಆನಂದದಲಿ ಬಂದು ಚಂದ್ರಮುಖಿಯರೆಲ್ಲ
ಚಂದದಿ ಹೆಸರನು ಕಂದನಿಗಿಟ್ಟರು ಕೋಲು ಕೋಲೆನ್ನ
ಕೋಲೆ ॥ ೧ ॥

ಮುಟ್ಟಿ ರಾಮನಡಿಯಾ ಪೂಜಿಪ ಶ್ರೇಷ್ಠಪೀಠದೊಡೆಯಾ
ಪುಟ್ಟ ಕುಮಾರನಿಗಿಟ್ಟರು ಹೆಸರನು ರಾಮಚಂದ್ರನೆಂದು
॥ ೨ ॥

ರಾಮದೂತನೀತ ಪಾಲಿಪ ಶ್ರೀಮನ್ಮಧ್ವಮತ
ಪ್ರೇಮದಿ ನಾಮವ ಭಾಮೆಯರಿಟ್ಟರು ರಾಮಚಂದ್ರನೆಂದು
॥ ೩ ॥

ಕಂದನವದನೇಂದು ಚಂದ್ರನ ಹಿಂದೆ ಹಾಕುವದೆಂದು
ಇಂದುವದನೆಯರು ಕಂದನ ಕರೆದರು ರಾಮಚಂದ್ರನೆಂದು
॥ ೪ ॥

ಯೋಗಿಯಾದ ಮೇಲೆ ಇವನು ಹೇಗೆ ಸಿಗುವ ನಾಳೆ
ಈಗಲೇ ಪಾಡುತ್ತ ಬಾಗಿತೂಗಿದರು ಕೋಲು ಕೋಲೆನ್ನ
ಕೋಲೆ ॥ ೫ ॥

ತೊಟ್ಟಿಲದೊಳಗಿರಿಸಿ ಕುಂಕುಮವಿಟ್ಟು ಅಲಂಕರಿಸಿ
ಬೆಟ್ಟದ ರಂಗನ ಪುಟ್ಟನ ಕರೆದರು ರಾಮಚಂದ್ರನೆಂದು
॥ ೬ ॥

(ವಚನ) ಹರುಷದಲಿ ಎಂಟನೆಯ ವರುಷದಲಿ ಹರಿಯಾರ್ಯ ಸರಸ ತಿಥಿಯಲ್ಲಿ ನಿರ್ಧರಿಸಿ ಮುಂಜಿವೆಕಾರ್ಯ ಕರೆಸಿ ಬ್ರಾಹ್ಮಣರ ಸತ್ಕರಿಸಿ ಭೋಜನದಲ್ಲಿ ಹರಸಿದನು ಕ್ಷೀರಘೃತರಸದ ಕಾವಲಿಯಾ ವರಸುಧಾಂಶವನ್ನು ಮರೆಸುವಾ ಮುಖವನ್ನು ಧರಿಸಿದಂತಹ ಬಟುಗಳರಸು ನಂದನನನ್ನು ಹರಿಸಿ ಆಶೀರ್ವಾದ ಪರ ಸುವಚನಗಳಿಂದ ಸುರಸಿ ಮಂತ್ರಾಕ್ಷತೆಯ ಮೆರಸಿದನು ಮುದದಿ.

("ಇಷ್ಟು ಎನ್ನ ಮೇಲೆ ಏಕೆ" ಎಂಬಂತೆ)

ಸತ್ಯಪ್ರಿಯತೀರ್ಥರೆಂಬ ಯೋಗಿವರ್ಯರು ಶಾಸ್ತ್ರ
ಸಾಮ್ರಾಜ್ಯವನ್ನು ಆಳುತ್ತಿದ್ದರು ॥ ೧ ॥
ಸುತ್ತು ಎಲ್ಲ ಪೀಠಗಳಿಗೆ ಉತ್ತಮವಾಗಿಹ ಉತ್ತರಾದಿ
ಪೀಠಕಿವರು ಮತ್ತೆ ಈಶರು ॥ ೨ ॥
ಚಿಂತಿಸುತ್ತಾ ರಾಮನನ್ನು ಅಂತರಂಗದಿ ಚಿಂತೆಯನ್ನು ಬಿಟ್ಟು
ನಿಶ್ಚಿಂತರಿದ್ದರು ॥ ೩ ॥
ಆದರೇನು ಚಿಂತೆಯೊಂದು ಬಾಧಿಸಿತವರನು
ಸಾಧುಗಳಿನ್ನಾದರೇನು ಚಿಂತೆ ತಪ್ಪದು ॥ ೪ ॥
ಮೋದತೀರ್ಥ ಪೀಠಕುತ್ತರಾಧಿಕಾರಿಯು ಮೇದಿನಿಯೊಳಗಾರು
ಎಂದು ಚಿಂತಿಸಿದರು ॥ ೫ ॥
ಉತ್ತಮರ ಚಿಂತೆಯೆಂದು ವ್ಯರ್ಥವಾಗದು ಸತ್ಯ ಸಂಕಲ್ಪನದನು
ಪೂರ್ತಿಮಾಳ್ಪನು ॥ ೬ ॥
ಇತ್ತ ಹರಿಯಾರ್ಯ ತನ್ನ ಪುತ್ರನೊಂದಿಗೆ
ಪ್ರಾಪ್ತನಾದನಾಗ ಸತ್ಯಪ್ರಿಯರಲಿಗೆ ॥ ೭ ॥
ಬ್ರಹ್ಮಚಾರಿ ಬಾಲಕನ ಬ್ರಹ್ಮತೇಜವಾ ಸಮ್ಮುದದಿ ನೋಡಿದನು
ಯೋಗಿಪುಂಗವಾ ॥ ೮ ॥
ದಿವ್ಯ ದೃಷ್ಟಿಯಿಂದಾ ಲಕ್ಷಣಗಳ ನೋಡಿದಾ ಯೌವ
ರಾಜ್ಯನಿವಗೆ ಕೊಡಲು ಮನಸು ಮಾಡಿದಾ ॥ ೯ ॥

ರಂಗನಾಥನೆಂಬ ರಾಮನಂಘ್ರಿಪೂಜೆಯ ಸಾಂಗವಾಗಿ ಮಾಳ್ಪ
ಬಾಲನಿವಗೆ ನಿಶ್ಚಯ ॥ ೧೦ ॥

(ವಚನ) ದೂರದಿಂದಲಿ ಭಕ್ತಿ ಭಾರದಿಂದಲೆ ನಮಸ್ಕಾರ ಮಾಡಿದ ಈ ಕುಮಾರ ಬಟುವರ್ಯನಲಿ ಧೀರಸದುದಾರ ಗಂಭೀರ ಗುಣಗಳ ಸಮಾಹಾರವನು ನೋಡುತಲಿ ಸಾರಜ್ಞರು ಶ್ರೀ ರಾಮಚಂದ್ರನ ಪ್ರೇರಣೆಯ ಗೌರವಿಸಿ ಈ ರತ್ನಬಟುವನ್ನು ಹರಿಯಾರ್ಯನಿಂದ ಸ್ವೀಕಾರ ಮಾಡುವುದು ನಿರ್ಧಾರ ಮನದಲಿ ಮಾಡಿ ಈ ರೀತಿ ನುಡಿದರಾ ಧಾರುಣೀಸುರಗೆ

-----

ಒಂದು ನಮ್ಮಾಜ್ಞೆಯ ಇಂದು ನೀನಡಿಸಲು ಬೇಕಯ್ಯ
ಹರಿಯಾರ್ಯಾ ॥ ಪ ॥

ಸಂದೇಹವೇಕೆ ಮನಬಂದದ್ದಾಜ್ಞಾಪಿಸಿರಿ ಪಾಲಿಸುವೆ
ಗುರುವರ್ಯಾ ॥ ೧ ॥

ನಿನ್ನ ಬಾಲನ ನಮ್ಮ ಸನ್ನಿಧಿಗೊಪ್ಪಿಸು ಪಾಠಕ್ಕೆ ಹರಿಯಾರ್ಯಾ
ಸಣ್ಣ ಪ್ರಾಣದ ಪುತನನ್ನಗಲಿ ಜೀವಿಸಲಿನ್ನೆಂತು ಗುರುವರ್ಯಾ
॥ ೨ ॥

ಪುತ್ರ ಮಿತ್ರರು ಪರಮಾತ್ಮನ ಪರಿವಾರ ತತ್ವವ ನೀನರಿಯಾ
ಸತ್ಯ ಮಾತಾದರೂ ಚಿತ್ತದಲ್ಲಿ ಆ ವಿರಕ್ತಿಯೆನ್ನೊಳಿಲ್ಲ ॥ ೩ ॥

ಧಡ್ಡನೇನೋ ನೀನು ದೊಡ್ಡ ಸತ್ಕಾರ್ಯಕ್ಕೆ ಅಡ್ಡ ಬರುವುದು ಸಲ್ಲ
ಮಡ್ಡಮತಿಯು ನಾನು ಒಡ್ಡುವೆ ಬೊಗಸೆಯ ಕ್ಷಮಿಸಯ್ಯಾ
ಗುರುವರ್ಯಾ ॥ ೪ ॥

ರಂಗನಾಥನೆ ನಿನಗೆ ಮಂಗಳ ಮತಿಯನು ಕರುಣಿಸಲಿ ಹರಿಯಾರ್ಯಾ
ಹಾಂಗೆ ಆಗಲಿ ನಿಮ್ಮ ಅಂಘ್ರಿಗೆ ಬಾಲನನ್ನೊಪ್ಪಿಸಿದೆ
ಗುರುವರ್ಯಾ ॥ ೫ ॥

(ವಚನ) ಅಷ್ಟ ವರ್ಷದ ಬಟು ಶ್ರೇಷ್ಠನನು ಬಲು ಪ್ರೀತಿ ಬಟ್ಟು
ನಿಜಸನ್ನಿಧಿಯೊಳಿಟ್ಟುಕೊಂಡೀತನಿಗೆ ಪಟ್ಟಗಟ್ಟಲು ಮನದಿ
ತೊಟ್ಟು ಸಂಕಲ್ಪವನು ಅಷ್ಟೊಂದು ಪರಮ ಉತ್ಕೃಷ್ಟ ಶಾಸ್ತ್ರಗಳ
ಬಿಟ್ಟು ಬಿಡದಲೆ ಸುಸಂತುಷ್ಟ ಹೃದಯದಿ ಪೇಳಿ
ಅಷ್ಟದಿಕ್ಕುಗಳೊಳುತ್ಕೃಷ್ಟ ನಿವನೆಂದೆನಿಸಿ ಅಷ್ಟರೊಳು ತಾರುಣ್ಯ
ಮುಟ್ಟಿದ್ದು ಸ್ಪಷ್ಟದಲಿ ಶ್ರೇಷ್ಠ ಸತ್ಯಪ್ರಿಯರು ದೃಷ್ಟಿಸಿದರು

(ಶೋಭಾನ)

ಶೋಭಾನ ಸೀತಾಪತಿ ರಾಮಚಂದ್ರಗೆ
ಶೋಭಾನ ಸತ್ಯ ಪ್ರಿಯತೀರ್ಥಗೆ || ಪ ||

ಪ್ರಿಯತೀರ್ಥ ಪ್ರಿಯನಾದ ರಾಮಚಂದ್ರಾರ್ಯಗೆ ಶೋಭಾನ
|| ೧ ||

ಆಪ್ತರಿಷ್ಟರ ಬಿಟ್ಟು ಯತ್ಯಾಶ್ರಮಿಯಾದರೂ ಸತ್ಯಪ್ರಿಯತೀರ್ಥರಿಗೀ
ಭ್ರಾತ್ರ
ಭ್ರಾತ್ರ ರಾಮಾರ್ಯನೊಳಿತ್ತು ಅತ್ಯಂತ ಆಸಕ್ತಿ || ೨ ||
ಕಾಮ ಬಿಟ್ಟರೇನು ರಾಮಚಂದ್ರನ ಪ್ರೀತಿ ಕಾಮವನೆಂದಿಗೂ ಬಿಡುವರೇ
ರಾಮಚಂದ್ರನ ಭಕ್ತ ರಾಮಾರ್ಯನೊಳಗವರು ಪ್ರೇಮ ಮಾಡಿದ್ರೇ
ಶೋಭಾನ || ೩ ||
ಮಾನ್ಯರು ರೂಪಸಂಪನ್ನಳಾದಂಥ ಶುಭ ಕನ್ಯಾಮಣಿಯೊಡನೆ
ಸುಮುಹೂರ್ತ
ಸುಮೂಹೂರ್ತದಲ್ಲಿವನ ಪುಣ್ಯವಿವಾಹ ನಿರ್ಧರಿಸಿದರು || ೪ ||
ಶೋಭಾನವೆನ್ನಿರೇ ರಾಮಚಂದ್ರಾರ್ಯಗೆ ಶೋಭಾನವೆನ್ನಿ ಕನ್ಯಾಮಣಿಗೆ
ಶೋಭಿಸುವಂಥ ಈ ಶುಭ ದಂಪತಿಗಳಿಗೆ ಶೋಭಾನವೆನ್ನಿ
ಶೋಭಾನೆ || ೫ ||
ನೂತನ ವಧೂ ಸಮೇತನಾದ ತಮ್ಮ ಪ್ರೀತಿಯ ಶಿಷ್ಯನ ಮೆರವಣಿಗೆ
ಆತುರದಿಂದ ನೋಡಲು ಅವಧೂತನಾಥರುಪಾಯವ
ಮಾಡಿದರು || ೬ ||

ಲಗ್ನ ಮೆರವಣಿಗೆಯ ಮಾರ್ಗದಲ್ಲಿ ಒಬ್ಬ ಸದ್ಗೃಹಸ್ಥನ ಮನೆಯಲ್ಲಿ
ಹಿಗ್ಗಿನಿಂದ ಪಾದಪೂಜೆಯ ನೆವದಿಂದ ಸದ್ಗುರೂತ್ತಮರು
ತೆರಳಿದರು ॥ ೭ ॥

ಅಲ್ಲಿಂದಲೇ ನೋಡಿ ವಲ್ಲಭೆಯುತನಾದ ಚೆಲ್ವಶಿಷ್ಯನ್ನ ಗುರುರಾಯ
ಉಲ್ಲಾಸದಿಂದ ಶ್ರೀವಲ್ಲಭನಿಗೆ ಮಾಂಗಲ್ಯವೀಯಲೆಂದು ಹರಿಸಿದಾ
॥ ೮ ॥

ಈ ವಧೂವರರನ್ನು ವಿವಾಹ ಕಾಲದಿ ಭಾವನೆಯಿಂದಾರು
ಸ್ಮರಿಸುವರೋ
ಆ ವಧೂವರರಿಗೆ ಭಾವಿ ಸೌಭಾಗ್ಯವನೀವ ಶ್ರೀಹರಿಯೆಂದು
ಹರಿಸಿದಾ ॥ ೯ ॥

ರಂಗನಾಥನು ಮದುವೆ ಮಂಗಳ ಕಾಲದಿ ಸಂಗೀತವಿದನು ಪರಿಪರಿ
ಮಾಂಗಲ್ಯ ಸೌಭಾಗ್ಯ ಸುರಿಸಲೆಂದು ಯೋಗಿಪುಂಗವ
ಆಶೀರ್ವದಿಸಿದಾ ॥ ೧೦ ॥

(ವಚನ) ಶ್ರುತಿರಾಜ್ಯ ಪತಿಯಾಗ್ಗೆ ಕ್ಷಿತಿಯನ್ನು ಬಿಟ್ಟು ಶ್ರೀಪತಿಯಂಘ್ರಿ
ಯೆಂಬ ಸದ್ಗತಿಯ ನೈಯುವದಕ್ಕೆ ಮತಿಯನ್ನು ಮಾಡಿ
ಸುವ್ರತನಾದ ರಾಮಾರ್ಯ ಕ್ಷಿತಿದೇವನನ್ನು ಅತಿ ಹಿತದಿ
ಕರೆದು ಸತಿಸುತರೊಳಭಿಮಾಮ ಮತಿಯನ್ನು ನೀ ತೊರೆದು
ಯತಿಯಾಗು ಶ್ರೀ ಮಧ್ವಮತದ ಸಾಮ್ರಾಜ್ಯಕಧಿಪತಿಯಾಗು
ಜಾನಕೀಪತಿಯ ಪೂಜೆಯ ಮಾಡಿ ಕೃತಕೃತ್ಯನಾಗೆಂದು
ಬೋಧಿಸಿದನು

(ಬರೆಯಲಿಲ್ಲ ಓದಲಿಲ್ಲವೋ ಎಂಬಂತೆ)

ಗುರುಗಳಾಜ್ಞೆ ಶಿರದಿ ಧರಿಸಿದಾ ರಾಮಾರ್ಯನಾಗ ॥ ಪ ॥
ಗುರುಗಳಾಜ್ಞೆ ಶಿರದಿ ಧರಿಸಿ ಹರಿಯ ಪಾದವನ್ನು ಸ್ಮರಿಸಿ
ಪರಿಪರಿಯ ಮೋಹ ತ್ಯಜಿಸಿ ಪರಮಹಂಸಾಶ್ರಮವ ವರಿಸಿ
॥ ಅ ಪ ॥

ಸತ್ಯಬೋಧತೀರ್ಥರೆಂಬುವ ಅನ್ವರ್ಥವಾದ ಸುತ್ಯ ಪವಿತ್ರ ನಾಮವ
ಪೊತ್ತು ಉತ್ತರಾದಿಮಠದ ಉತ್ತಮ ಪೀಠದಲಿ ಅಭಿಷಿಕ್ತನಾಗಿ
ಶ್ರುತಿ ಪುರಾಣ ಶಾಸ್ತ್ರ ಚಕ್ರವರ್ತಿಯೆನಿಸಿ || ೧ ||
ದಂಡಕಾಷ್ಠವನ್ನು ಧರಿಸಿದಾ ಭೂಮಂಡಲಕ್ಕೆ ಮಂದನಾಗ್ರನೆಂದು ಎನಿಸಿದ
ಪುಂಡಮಾಯಿ ಪಂಡಿತ ಪ್ರಚಂಡ ಗರ್ವ ಕತ್ತಲೆಯನು ಖಂಡಿಸುವದಕ
ಖಂಡವಾಗಿ ಚಂಡ ಮಾರ್ತಾಂಡನೆನಿಸಿ || ೨ ||
ಮಧ್ವ ವಂಶದುಗ್ಧವಾರ್ಧಿಗೆ ವೃದ್ಧಿಕರಸ ಮೃದ್ಧಪೂರ್ಣ ಚಂದ್ರನೆನೆಸಿದಾ
ಸದ್ಗುರುಗಳು ಸುಪ್ರಸನ್ನ ಬುದ್ಧಿಯಿಂದಾ ಪೇಳ್ದ ಪ್ರಣವ ವಿದ್ಯೆಯನ್ನು
ಜಪಿಸಿ ಸಿಂಹಾದ್ರಿ ರಂಗನಾಥನೊಲಿಸಿ || ೩ ||

(ವಚನ) ಅತ್ಯಂತ ಅನುರೂಪ ಪುತ್ರನನ್ನ ಪಡೆದು ಕೃತ ಕತ್ಯರಾದಂಥ
ಶ್ರೀ ಸತ್ಯಪ್ರಿಯರು ಆಗ್ಯೆ ಮತ್ತು ರುಧಿರೋದ್ಗಾರಿ ವತ್ಸರದ
ಸಿತ ಪಕ್ಷ ಚೈತ್ರ ತ್ರಯೋದಶಿ ಮೂಹೂರ್ತದಲ್ಲಿ ತತ್ವಗಳ
ಲಯಗಳನು ಚಿತ್ತದಲಿ ಯೋಗ ಸಾಮರ್ಥ್ಯದಲಿ ಚಿಂತಿಸುತ
ಮುಕ್ತಿಲೋಕಕ್ಕೆ ಸಂಪ್ರಾಪ್ತರಾಗುತ್ತಿರಲು ಸತ್ಯಬೋಧರು ಮನದ
ಆರ್ತಿಯನು ನಿಗ್ರಹಿಂಸಿ ಭಕ್ತಿಯಿಂದ

(ಬೇಗ ಬಾರೋ ಬೇಗ ಬಾರೋ ಎಂಬಂತೆ)

ಕೃತಮಾಲಾ ನದಿಯ ಪವಿತ್ರ ದಂಡೆಯಲಿ ಆತಿಶಯ
ಗುರುಭಕ್ತಿಯುತವಾದ ಮನದಿ || ೧ ||
ಸತ್ಯಪ್ರಿಯರ ಸುಪವಿತ್ರದೇಹವನು ಸತ್ಯಬೋಧರು ತಂದು
ಸಂಸ್ಥಾಪಿಸಿದರು || ೨ ||
ಅಂದು ನಿರ್ಮಿಸಿ ಪುಣ್ಯ ವೃಂದಾವನವನು ಒಂದೇ
ಮನಸಿನಿಂದ ವಂದಿಸಿದರು || ೩ ||
ಮೌನಿವರ್ಯರ ಸನ್ನಿಧಾನ ಕಾರಣದಿ ಮಾನಾ ಮಧುರೆಯ
ಧನ್ಯ ಮಾನ್ಯವೆನಸಿತು || ೪ ||
ನಾನಾ ಪಂಡಿತರಿಗೆ ಏನೇನು ಬೇಕೊ ಜ್ಞಾನಶ್ರೇಷ್ಠರು
ಆಗ್ಯೆ ದಾನ ಮಾಡಿದರು || ೫ ||

ಥಂಡ ಥಂಡದ ಭೋಜ್ಯ ಮಂಡಿಗೆ ಬುಂದೆ ಉಂಡಿಯ
ವಿಪ್ರರು ಉಂಡು ತೇಗಿದರು || ೬ ||
ಬೋಧತೀರ್ಥರು ಸಮಾರಾಧನೆ ಮುಗಿಸಿ ಭೂಧರ ರಂಗನ
ಪಾದಕ್ಕೆರಗಿದರು || ೭ ||

(ವಚನ) ಅಂದು ಸೂರ್ಯಗ್ರಹಣ ಪರ್ವಕಾಲದಲಿ ಯೋಗೀಂದ್ರ
ನಾನಂದಲಿ ಸೇತುಸ್ನಾನಕ್ಕಾಗಿ ಬಂದಿರಲು ರಾಮನಾಥೂರಿ
ನೊಡೆಯನಿಗೋರ್ವ ನಿಂದಕ ಬ್ರಾಹ್ಮಣನು ಚಾಡಿ ಹೇಳಿ
ವಂದ್ಯರಿವರನ್ನು ನಿರ್ಬಂಧಿಸುವ ಯತ್ನವನು ಮಂದಬುದ್ಧಿಯಲಿ
ತಾ ಮಾಡಿಸಿದ್ದ ಪಾಪಕ್ಕೆ ಅಂದೆಯೇ ಹೊಟ್ಟೆಶೂಲಿಯಲಿ
ಹೊರಳಾಡುತ್ತ ನೊಂದಿದನು ಏನೆಂಬೆನಿವರ ಮಹಿಮೆ
ಹೊಟ್ಟೆಶೂಲಿಯ ಉಗ್ರ ಕಷ್ಟವನು ಸಹಿಸದಲೆ
ಎಷ್ಟೊಂದುಪಾಯವ ಮಾಡಿದಾಗ್ಯಾದರೂ ಕೆಟ್ಟ ದುರ್ಬಾಧೆ
ಒಂದಿಷ್ಟು ಹೋಗದಲೆ ಮತ್ತಿಷ್ಟು ಬೆಳೆಯಲು ದುಃಖ ಪಟ್ಟು
ಖಳನು ಥಟ್ಟನೆ ಗರ್ವವನು ಬಿಟ್ಟು ಪಶ್ಚಾತ್ತಾಪ ಬಟ್ಟು
ಸೇವಕ ಭಾವ ತೊಟ್ಟು ಗುರುಗಳಿಗೆ ಮೊರೆ ಇಟ್ಟಿರಲು
ಕೂಡಲೆ ನಷ್ಟವಾಯಿತು ಶೂಲೇ ಎಷ್ಟು ಪೇಳಲಿ
ಗುರುಶ್ರೇಷ್ಠರ ಮಹಿಮೆ

ಹರಿಶರಣು ಮಧ್ವ ಗುರು ಶರಣೇಂಬಂತೆ

ಇತ್ತ ತ್ರಿಚನಾಪಳ್ಳಿ ಪತ್ತನ ಕೋಟೆಯನು ಸತ್ಯಬೋಧರ ಪ್ರೀತಿಯ
ಭೃತ್ಯ ಮುರಾರಿಯೆಂಬುತ್ತುಮರಾಜನು ಮತ್ತೆ ಪಾಲಿಸುತಿದ್ದನು
|| ೧ ||
ಇಷ್ಟರೊಳು ಯವನ ಶ್ರೇಷ್ಠನೊಬ್ಬನು ತ್ರಿಚನಾಪಟ್ಟಣವನ್ನು ಮುತ್ತಿ
ಎಷ್ಟಾದರೂ ಕೋಟೆ ವಶವಾಗದಿರುವಾಗ ಹುಟ್ಟಿತ್ತು ಅವಗೆ ಚಿಂತೆ
|| ೨ ||
ಮೂರು ತಿಂಗಳವು ಮುರಾರಿಯು ದುರ್ಗವ ಧೀರತನದಲಿ ಕಾಯಲು
ನೈರಾಶ್ಯದಿಂದ ಭಯಗೊಂಡ ಯವನೇಶಗೆ ಹಾರಿದವಾಗ ಕಾಲು
|| ೩ ||

ಕರಿಸಿ ಮಂತ್ರಿಗಳನ್ನು ಕೆರಕೊಂಡು ತಲೆಯನ್ನು ಹಾಕಿದ ಹಂಚಿಕೆಯನ್ನು
ಅರಿಯ ಗುರುಗಳಾದ ಶ್ರೀ ಸತ್ಯಬೋಧರನು ಹಿಡಿದು ಕೂಡಿಸುವದನ್ನು
|| ೪ ||

ಪರಿವಾರಸಹಿತಾಗಿ ಗುರುವನ್ನು ಕೋಟೆಯ ಹೊರಗೆ ಮದ್ದು ಗುಂಡುಗಳು
ಸುರಿಯುವ ಸ್ಥಳದಲ್ಲಿ ಇರಸಬೇಕೆಂದು ಆ ದುರುಳನಾಲೋಚಿಸಿದನು
|| ೫ ||

ಈ ಪರಿ ತನಗಾಗಿ ಆ ಪೂಜ್ಯ ಗುರುಗಳು ತಾಪ ಹೊಂದಿದ್ದು ನೋಡಿ
ಪಾಪಕ್ಕೆ ಬೆದರಿ ಆ ಭೂಪಕೋಟೆಯ ಬಿಟ್ಟು ಪೋಪನೆಂದೆಣಿಸಿದನು
|| ೬ ||

ಭರದಿ ರಾಮನಾಥಪುರಕೆ ಕಳುಹಿದನಾಗ ತುರಕರ ಸೈನ್ಯವನು ತರಲು
ಆಜ್ಞಾಪಿಸಿ ಪರಿವಾರ ಸಹಿತವಾಗಿ ಸಿರಿ ಸತ್ಯಬೋಧರನ್ನು || ೭ ||
ಇತ್ಯಾದಿಯಾದ ಆಪತ್ತು ಬಂದರೂ ಸದ್ಗುರೂತ್ತಮನು ನಿರ್ವಿಕಾರ
ಚಿತ್ತದಿಂದಿದ್ದನು ಸಿರಿ ರಂಗನಾಥನ ಭಕ್ತರದು ಪ್ರಕಾರ || ೮ ||

(ವಚನ) ಮದ್ದುಗುಂಡುಗಳು ಸಲೆಗದ್ದರಿಸಿ ಸುರಿಯುತ್ತಲಿದ್ದ ಕೋಟೆಯ
ಹೊರಗೆ ಕೆಳಗಿನ ಪ್ರದೇಶ ಮಧ್ಯದಲಿ ಸ್ಥಬ್ಧ ದುರ್ಬುದ್ಧಿ
ಯವನೇಶ್ವರನು ಸದ್ಗುರೂತ್ತಮರನ್ನು ನಿಲ್ಲಿಸಲು ಅಗ್ಗೆ
ಉದ್ವೇಗಗೊಂಡ ಪರಿವಾರಕೆ ಸಮಾಧಾನ ಬುದ್ಧಿಯನು ಪೇಳಿ
ಶ್ರೀರಾಮನು ಭೃತ್ಯರಿಗೆ ಮದ್ದು ಬಡಿಯದ ಹಾಗೆ ಸಲುಹ
ಬೇಕೆಂತೆಂದು ಸದ್ಗುರುತ್ತಮರು ಸಂಪ್ರಾರ್ಥಿಸಿದರು ಭಕ್ತಿ
ಯೋಗಿಗಳಾದ ಉತ್ತಮರು ಮಾಡಿದ ಪ್ರಾರ್ಥನೆಯು
ಎಂದಿಗೂ ವ್ಯರ್ಥವಾಗುವದುಂಟೇ ಭಕ್ತವತ್ಸಲನೆಂಬ ಬಿರುದು
ಪರಮಾತ್ಮನದು ವ್ಯರ್ಥವಾಗುವುದೇ ಕಾಲತ್ರಯದಲಿ ಸುತ್ತಲೂ
ಮದ್ದು ಸುರಿಯುತ್ತಿದ್ದರೆ ಏನು ಹತ್ತಿರದಲೆ ಇದ್ದ
ಭೃತ್ಯರೊಬ್ಬೊಬ್ಬರಿಗೂ ಹತ್ತಲಿ ಇಲ್ಲ ಕಿಂಚಿತ್ತು ಅಗ್ನಿಯ
ಝಳವುಯತ್ಯುತ್ತಮರ ಯೋಗಶಕ್ತಿಗೇನೆಂಬೇ ಈಗ
ಯವನೇಶ್ವರನು ರೇಗಿ ಈ ಯೋಗಿ ಬೈರಾಗಿಗೀ ಮತ್ತು
ಮಣಿ ಭಾಗ್ಯ ಮಂಟಪ ರತ್ನ ಹೇಗೆ ಬಂದವು ತನ್ನ ವೈರಿ

ಮುರಾರಿಯೇ ಸಾಗಿಸಿರಬೇಕಿವನ ಬಳಿಗೆ ಗೌಪ್ಯದಲಿ ಹೀಗೆಂಬ
ಭ್ರಮೆಯಿಂದ ಆಗೆ ನಿಜ ಭಟರಿಗೆ ನಿಯೋಗವಿತ್ತನು ನೀವು
ಬೇಗ ಪಪತ್ತೇಕುವಾಗಿವನ ಸ್ವತ್ತು ಚೆನ್ನಾಗಿ ಪರಿಶೀಲಿಸಿರಿ
ಹೋಗಗೊಡಬೇಡಿರೀ ಯೋಗಿ ಯೋಗಿಯನ್ನೆಂದೂ

ಕೈಲಾಸ ವಾಸ ಗೌರೀಶ ಈಶ ಎಂಬಂತೆ

ಜುಲುಮೆಯಿಂದಲಿ ಶಳೆದ ಮಠದ ಸಂಪತ್ತು
ಖಳಯವನ ತನ್ನ ದೂತರಿಗಾಜ್ಞೆಯಿತ್ತು ॥ ಪ ॥

ಎಷ್ಟು ಯತ್ನಿಸಿದರೂ ಅವನ ಶಿಷ್ಯನು ತನಗೆ
ಬಿಟ್ಟು ಕೊಡಲಿಲ್ಲ ಕೋಟೆಯನೆಂಬುವ
ಸಿಟ್ಟು ಹೊಟ್ಟೆಯೊಳಿಟ್ಟು ದುಷ್ಟ ಹೇತುವಿನಿಂದ
ಶ್ರೇಷ್ಠ ಯತಿಪಾಲನನ್ನಿಟ್ಟು ಬಂಧನದಿ ॥ ೧ ॥

ತಂಗಿಯಾ ಕಿವಿಗಳನು ಕೊಯ್ಸಿ ಖರದೂಷಣರ
ಭಂಗಗೊಳಿಸಿದನೆಂಬ ಸಿಟ್ಟಿನಿಂದ
ಕಂಗೆಟ್ಟ ರಾವಣನು ರೇಗಿ ಶ್ರೀರಾಮನ
ರ್ಧಾಂಗಿಯನು ಛಲದಿಂದ ಅಪಹರಿಸಿದಂತೆ ॥ ೨ ॥

ವೀರ ಭೀಮನೊಳಿರುವ ವೈರದಿಂ ದ್ರೌಪತಿಯ
ಸೀರೆಯನು ಕೌರವನು ಸೆಳೆಸಿದಂತೆ
ಘೋರ ಮಮಿಮಂತ ದುರ್ಗತ ಬೀರಿ ಶ್ರುತಿ ಶಾಸ್ತ್ರ
ಭಾರತಿಯ ಮಾನವನು ಸೆಳೆದ ಬಗೆಯಂತೆ ॥ ೩ ॥

ಮುಂಬರುವ ಚುನಾವಣೆಗೆ ರೈತ ಮೊದಲಾದವರ
ಬೆಂಬಲವ ದೊರಕಿಸಲು ತಾಸಿಗೊಂದು
ಉಂಬಳಿಯ ಮಾಡಿ ಮನೆ ಮಾರು ಮಠ ಭೂಮಿ ಕಸಿ
ಗೊಂಬ ಕೃತಿಗೀಗಿನವರ್ರುಂಬಲಿಸುವಂತೆ ॥ ೪ ॥

ಪ್ರಲಯ ಜಲರಾಶಿಯೊಳು ಎಲೆಯ ಮೇಲೆ ಮಲಗಿರ್ದ
ಸಿರಿರಂಗನಾಥನನು ಕಂಡ ಮುನಿವರರೇ
ಇಳೆಯೊಳವಧೂತ ಕುಲತಿಲಕರಾಗಿರುತಿರಲು
ತಿಳಿಯದೇ ಇವರ ಉಜ್ವಲ ಮಹಿಮೆಯನ್ನು ॥ ೫ ॥

ರಂಗ ಕೊಳಲನೂದಲಾಗ ಎಂಬಂತೆ

ಪ್ರೊರೆಯೊ ಹರಿಯೊ ಎನ್ನುತ ಮೊರೆಯಿಟ್ಟ ದೊರೆಗೆ ಯೋಗಿನಾಥ
ಸಿರಿ ಮೂಲ ಸೀತಾರಾಮರು ದಿಗ್ವಿಜಯ ರಾಮವರ ವಂಶ ರಾಮ
ಪ್ರಸನ್ನ ವಿಠ್ಠಲನು ಸುಂದರ ವೇದವ್ಯಾಸ ಮೂರುತಿಗಳ ತ್ವರಿತದಿ
ಇರಿಸಿ ಮೂರೆರಡು ಪೆಟ್ಟಿಗೆಗಳೆಲ್ಲ ॥ ಅ ॥

ಪರಮಾಪ್ತರ್ದಂಥ ಧರಣೀಸುರರ ಮೇಲೆ ಹೊರೆಸಿ ತ್ರಿಕಾಟೆಂಬಪುರದ
ಭೀಮಾಖ್ಯಭೂಸುರನ ಮಂದಿರಕೆ ಎಚ್ಚರದಿ ಒಯ್ಯಿರೆಂದು ಹರಿಸಿ
ಆಜ್ಞಾಪಿಸಿ ಕಳುಹಿದನು ॥ ೧ ॥

ಎತ್ತಿತ್ತಲೂ ಯವನ ಭೃತ್ಯರು ಖಡ್ಗವ ನೆತ್ತಿ ಸುತ್ತಲೂ ಕಾಯುತ್ತಲಿದ್ದರೆ
ಏನು ಸತ್ಯಬೋಧರ ಯೋಗಶಕ್ತಿಯಿಂದಾಗ್ಯೆ ಆ ಧಾತ್ರೀಸುರರು ಹೊತ್ತು
ಮೂರ್ತಿಗಳಾ ಸ್ವಸ್ಥದಿ ಸಾಗಿದರು ಮತ್ತಿದ ಮ್ಲೇಚ್ಛರ ನೇತ್ರಗಳಿಗೆ ಎಷ್ಟು
ವ್ಯಕ್ತವಾಗದಂತೆ ಸತ್ವರದಿ ತ್ರಿಕಾಟ ಪತ್ತನಕೆ ಸಾಗಿ ಸಂಪ್ರಾಪ್ತರಾದರು
ಅಲ್ಲಿ ಕ್ಷೇಮದಿಂದ ॥ ೨ ॥

ಋಷಿ ವಂಶ ಶಶಿಯಾಗ್ಯೆ ವ್ಯಸನದಿ ರಾಮ ದರುಶನವು ತಪ್ಪಿದ್ದಕ್ಕೆ
ಅಸಮಾಧಾನಗೊಂಡು ಅಶನ ಪಾನಗಳ ತ್ಯಜಿಸಿ ತಪಸಿನಲ್ಲಿ ತುಸಂ
ತೀರ್ಥ ಮಾತ್ರ ಸೇವಿಸುತಲಿದ್ದ ಋಷಿವರ್ಯರ ದ್ರೋಹ ವಿಷವಿದು
ಎಂದಿಗು ಹುಸಿಯಾಗಬಲ್ಲದೆ ಮುಸಲರ ಸೈನ್ಯವು ನಿಶಿದಿನ ಕಸವಿಸಿ
ವಶವಾಗಿ ಹೊರಳಾಡಿ ಅಸುವ ತ್ಯಜಿಸಲಾರಂಭಿಸಿತು ಬೇಗಾ ॥ ೩ ॥

ತುರುಕರಾಜನು ತನ್ನ ಪರಿ ಪರಿ ಸೈನ್ಯವು ಜ್ವರ ಕೆಮ್ಮು ಒಂದೊಂದು
ಇರದೆಯೇ ಪಟ ಪಟ ಇರುತಿರತಲೇ ಹೀಗೆ ಮರಣ ಹೊಂದುವದನ್ನು
ಪರಿಕಿಸಿ ಮನದಿ ಗಾಬರೆಗೊಂಡನು ತುರಿಸುತ್ತ ತಲೆಯನ್ನು ಕರೆಸಿ
ಮಂತ್ರಿಗಳನ್ನು ನೆರೆದಂಥ ಸೈನ್ಯವೀ ಪರಿಯಿಂದ ಪ್ರಾಣಕ್ಕೆ ಎರವಾಗಿ
ತ್ವರಿತದಿ ಹುರಿದು ಹೋಗುವುದಕ್ಕೆ ಇರುವ ಕಾರಣ ಯೋಚಿಸಿರೆಂದನು
|| ೪ ||

ನೆರೆದ ಮಂತ್ರಿಗಳಲಿ ಗುರುಭಕ್ತಿಯುತನಾದ ವರ ಮಂತ್ರಿ
ನಿಂಬಾಳಕರನೆಂಬನೋರ್ವನು ದೊರೆಯೆ ಕೇಳೀಗ ಬಂದಿರುವ
ಆಪತ್ತಿಗೆ ಸರಿಯಾದ ಕಾರಣ ಅರಹುವೆನು ಸಿರಿರಂಗನಾಥ ಪರಮ
ಭಕ್ತರಾದೀ ಪರಮಹಂಸರನು ನೀ ಮರುಗಿಸಿದ ಪಾಪದ ಉರಿಯಿಂದ
ಸೈನ್ಯವು ಹುರಿದು ಹೋಗುತಲಿಹುದು ಪರಿಹಾರೋಪಾಯವ
ಪೇಳುವೆನು || ೫ ||

-----

ಅಲ್ಲಾ ಈ ಕೃತಿ ಅಲ್ಲಲ್ಲಾ
ಇಲ್ಲಿಲ್ಲ ಇದರಂಥಾ ಪಾಪ ಇಲ್ಲಿಲ್ಲ || ಅ ||

ಉತ್ತಮರ ದ್ರೋಹವು ಕ್ಷೇಮವಲ್ಲಲ್ಲಾ
ವ್ಯರ್ಥ ಹಾ ಅಂಧಂತಮದಿ ಬೀಳ್ವೆಯಲ್ಲಾ
ನಿತ್ಯ ನರಕದಿ ಬಿದ್ದರಾ ಕಾಯಿ ಮುಲ್ಲಾ
ಉತ್ಥಿತಿಯೇ ಇಲ್ಲ ಆ ಕಾಯಿ ಬಿಸಿ ಮುಲ್ಲಾ || ೧ ||

ಶರಣು ಹೋದರೆ ಯತಿಗೆ ನಿನ್ನ ಸ್ಥಿತಿ ಹಸನಾ
ಇರದಿದ್ದರೆಚ್ಚರಿಕೆ ನಿನ್ನ ಬಹು ಸೇನಾ
ಮರಣಾ ಹೊಂದುತ್ತ ಆಗುವುದೆಲ್ಲಾ ಹಸನಾ
ತಿರುಗಿ ಕೇಳಿದರೆ ಮನೆ ಮಾರೆಲ್ಲ ಹಸನಾ || ೨ ||

ಅಲ್ಲಾ ಭಳಿ ಅಲ್ಲಾ ಉರಿ ಅಲ್ಲಾ ಹತ್ತೆಂಟು
ಸುಳ್ಳೆ ಬೇನೆ ಇದು ಬೇರೆನೆ ಉಂಟು
ಅಲ್ಲಲ್ಲಾ ಬಗಲೊಳಗೆ ಪ್ಲೇಗಿನ ಗಂಟು
ಬಗಲಿಗೆ ಹಾಕಿದಿದ್ದು ಸ್ವಾಮಿಯ ಗಂಟು || ೩ ||

ಸ್ವಚ್ಛನಾದೀ ಯತಿಯ ಸೇವೆಯೇ ಅಚ್ಛಾ
ಹುಚ್ಚುಚ್ಚು ಕುಣಿದರೆ ನರಕಕ್ಕೆ ನರಕಕ್ಕೆ ಗಚ್ಛಾ
ಅಚ್ಯುತ ಶ್ರೀರಂಗನಾಥ ಇಚ್ಛಾ
ಇದರ ಮುಂದ್ಯಾರದೂ ನಡೆಯದಚ್ಛಚ್ಛಾ || ೪ ||

(ವಚನ) ಈ ಪರಿಯಲಾ ಮಂತ್ರಿ ಹೇಳುತ್ತಿರಲು ಆಪತ್ತಿಗೊಳಗಾದ
ಭೂಪ ಯವನನು ತನ್ನ ಪಾಪಕ್ಕೆ ಪರಮ ಅನುತಾಪ
ಮನದಲಿ ತೊಟ್ಟು ಭೂಪತಿಯುತಾನೆಂಬ ಗರ್ವ ಬಿಟ್ಟು
ಆ ಪರಮ ಪಾವನರ ಶ್ರೀಪಾದಧೂಳಿಯ ಸಮೀಪಕ್ಕೆ ನಮ್ರದಲಿ
ತಾ ಪ್ರಾಪ್ತನಾಗುತ್ತ ಸ್ವಾಪರಾಧಕ್ಕೆ ಕ್ಷಮಾಣಿಯ ದೈನ್ಯದಲಿ
ಈ ಪ್ರಕಾರದಲಿ ವಿಜ್ಞಾಪಿಸಿದನು

ಪಾಲಿಸೆ ಪದುಮಾಲಯೆ ಎಂಬಂತೆ

ಬೇಡಿಕೊಂಡನು ದೈನ್ಯದಿ ಜೋಡಿಸುತೆ ಕರಗಳ || ಪ ||

ಪ್ರೌಢ ಯತಿವರನನ್ನು ತಾ ತಿಳಿಗೇಡಿತನದಲಿ ಪೀಡಿಸುದುದಕೆ
ಗಾಢ ಪಶ್ಚಾತ್ತಾಪದಿಂದೊಡಗೂಡಿ ಮುಖ ಕಪ್ಪಿಟ್ಟು ಬಾಡಿ|| ಅ ಪ ||

ಪರಮಪೂಜ್ಯನಾದಂಥಾ ಗುರುವನ್ನು ಬಂಧನದಿರಿಸಿ ಮರುಗಿಸಿದಂಥಾ
ದುರಿತ ದರಿಯಾಳು ಕುಲ ಸಹಿತ ತಾ ಹುರಿದು ಹೋಗುವೆನೆಂದು
ನಡುಗುತ
ತ್ವರದಿ ತುರುಕನು ದೂರದಿಂದಲೆ ಎರಗಿ ಯೋಗಿಯ ಚರಣಯುಗಲಕೆ
|| ೧ ||

ಕಿಪದಿ ಮೊರೆಯಿಟ್ಟು ಅಧಿಕಾರಿಯೆಂಬುವ ದರ್ಪವೆಲ್ಲ ಬಿಟ್ಟು
ಬಿಪಪಾಲನೆ ನಿನ್ನೊಳಗೆ ನಾನಾ ಪ್ರಕಾರದಿ ನಾನು ಮಾಡಿದ ತಪ್ಪು
[illegible] ಕ್ಷಮಿಸು ಕ್ಷಮಿಸೈ ಹೇ ಪ್ರಭುವೆ ದಯತೋರು ಎನ್ನುತ
|| ೨ ||

[illegible] ಗುರಿ ಮಾಡಿದೆ ಸನ್ಯಾಸಿಯೇ ಉಪವಾಸ ನಿನ್ನನು ಕೆಡಹಿಂದೆ
ಹೇಸಿತನದಲಿ ನಾನು ಮಾಡಿದ ದೋಷರಾಶಿಗಳನ್ನು ಕ್ಷಮಿಸುತ
ನೀ ಸಲಹು ಸಲಹೆನ್ನ ವಂಶವ ನಾಶದಿಂದುಳಿಸೆಂದು ಯವನನ
|| ೩ ||

ಬಿಟ್ಟುಬಿಡು ವಂಶ ಯವನು ಪೂಜಿಸುವ ದೇವರ ಪೆಟ್ಟಿಗೆಗಳ ತರಿಸೋ
ನೀನು ಕೊಟ್ಟ ನುಡಿಯಿದು ಒಟ್ಟು ನನ್ನಯ ರಾಷ್ಟ್ರದ್ಯಾರೇ ನಿನ್ನ ಕೂದಲು
ಮುಟ್ಟಿದರೆ ಆ ದುಷ್ಟರನು ನಾ ಸುಟ್ಟು ಬಿಡುವದು ಘಟ್ಟಿ ಎನ್ನುತ
|| ೪ ||

ಹೆಚ್ಚು ಮಾತಿನ್ನು ಸಾಕು ನನ್ನನ್ನು ನಿನ್ನಯ ಭೃತ್ಯನೆಂದೆಣಿಸಬೇಕು
ಮ್ಲೇಚ್ಛನೆನ್ನುತ ತುಚ್ಛಿಸಿದೆ ಸಂರಕ್ಷಿಸಲಿಬೇಕೆಂದು ಒದರುತ
ಪ್ರೋಚ್ಛಗುಡ್ಡದ ರಂಗನಾಥನ ಮೆಚ್ಚಿಸಿದ ಅಪರೋಕ್ಷಜ್ಞಾನಿಗೆ || ೫ ||

(ನಿನ್ನ ನೋಡಿ ಧನ್ಯನಾದೆನು ಎಂಬಂತೆ)

ಸ್ವಾಮಿ ಪಾದ ಪೂಜಿಸಿದನು ಹರುಷದಿಂದ || ಪ ||
ಸ್ವಾಮಿ ಪಾದ ಪೂಜಿಸಿದನು || ಅ ಪ ||

ಸ್ವಾಮಿ ಪಾದನು ತ್ರಿಕಾಟ ಗ್ರಾಮ ಕೊಬ್ಬ ಪ್ರೇಮ ಪಾತ್ರ
ಭೂಮಿಸುರನ ಕೊಟ್ಟು ಕಳುಹಿ ರಾಮದೇವರನ್ನು ತರಿಸಿ || ೧ ||

ಹತ್ತು ದಿನದವರೆಗೆ ಈ ನಿಮಿತ್ತದಿಂದು ಪೋಷಣೆಯನು
ಸತ್ಯಮತಿಯು ನಿರ್ವಿಕಾರ ಚಿತ್ತದಿಂದ ಮಾಡಿ ಮುಗಿಸಿ || ೨ ||

ಮ್ಲೇಚ್ಛ ತನಗೆ ಮೆಚ್ಚಿ ಕೊಟ್ಟ ಪಚ್ಚ ಹವಳ ಕಾಂತಿಯಿಂದ
ಮುಚ್ಚಿ ಹೊಳೆವ ಸ್ವಚ್ಛ ರತ್ನ ಪ್ರೋಚ್ಛ ಮಂಟಪದೊಳಿರಿಸಿ || ೩ ||

ವ್ಯಾಸ ವಿಠಲ ದಿಗ್ವಿಜಯ ಶ್ರೀವಂಶ ರಾಮಮೂಲ
ಶ್ರೀಸೀತಾರಾಮರೆಂಬ ಈಥ ರಂಗನಾಥನನ್ನು || ೪ ||

(ವಚನ) ಯತಿಪತಿಯು ಕಾವೇರಿ ತಟದಿ ಚಾತುರ್ಮಾಸ ವ್ರತವ
ಶ್ರುತಿವಿಹಿತ ರೀತಿಲಿ ಸಮಾಪಿತಗೊಳಿಸಿ ಅತಿ
ಭಕುತಿಯುತನಾದ ತಂಜಾವರದ ರಾಜ್ಯ ಪತಿಯ
ಪ್ರಾರ್ಥನೆಯಂತೆ ಅವನ ಪುರಕೆ ಹಿತದಿ ಆಗತನಾಗಿ
ಅವನ ಆಸ್ಥಾನ ಪಂಡಿತ ಗರ್ವವನೆಲ್ಲ ಗತಿಗೆಡಿಸಿ ಶ್ರೀ
ಮಧ್ವಮತವೆ ಸನ್ಮತವು ಸದ್ಗತಿಗೆ ಸಾಧನವೆಂದು ಕ್ಷಿತಿ
ತಳದೊಳೆಲ್ಲ ವಿಶ್ರುತಗೊಳಿಸಿದಾ

(ಉರುಟಣಿ ಹಾಡಿನ ಧಾಟಿ)

ಶ್ರೀಮುಷ್ಣಗ್ರಾಮದಲಿ ಈ ಮುನಿ ತಾ ಪ್ರೇಮದಲಿ
ರಾಮಸೀತೆಯರ ಸಹಿತ ಪೂಜಿಸಿದ ಭೂಮಿವರಾಹನನ್ನು || ೧ ||

ಲಕ್ಷ್ಮೀನಾಥನನೀತ ಲಕ್ಷಹೂವುಗಳನರ್ಪಿಸುತ
ಮೆಚ್ಚಿಸಲೋಸುಗ ಅಕ್ಷಯ ಭೋಧನು ನಿಶ್ಚಯ ಮಾಡಿವನು
|| ೨ ||

ಅಲ್ಲಿಯ ದೇಶದಿ ಮಳೆಯು ಇಲ್ಲದ ಕಾರಣ ಬೆಳೆಯು
ಇಲ್ಲದೆ ಹೂಗಳ ಬಳ್ಳಿಗಳೆಲ್ಲವು ಬಾಡಿದ್ದವು ಆಗ್ಗೆ || ೩ ||

ಎಂತೆಂತದಾದರೆ ಏನು ಅನಂತನದಾಸನು ಇವನ
ಚಿಂಚಿಸಿದಂಥ ಸಂಕಲ್ಪ ವ್ರತ ನಿಂತು ಹೋಗುವದೇನು || ೪ ||

ಒಣಗಿದ ಬಳ್ಳಿಗೆ ಆಗ ಮುನಿವರ ತೀರ್ಥವನೀಗ
ಹನಿ ಹನಿ ಸಿಡಲು ಗೊನೆ ಗೊನೆ ಗೊಂಚಲು ಸುರಿದವು
ಕುಸುಮಗಳ || ೫ ||

ಆಗಲೆ ಅಂದಿನ ಕಾಲ ಬೇಗನೆ ಬಳ್ಳಿಗಳೆಲ್ಲ
ಹೂಗಳ ಭಾರಕೆ ಬಾಗಿ ತೋರಿದವು ಯೋಗಿಯ ಮಹಿಮೆಯನು
|| ೬ ||

ಬೆಟ್ಟದ ರಂಗನುದಯದಿ ಕೊಟ್ಟಿಹ ಹೂಗಳ ಮುದದಿ
ಮುಟ್ಟಿಸಿ ಆತನ ಪಾದಕೆ ನಮಿಸಿದ ಸಾಷ್ಟಾಂಗದಿ ಗುರುವು || ೭ ||

(ವಚನ) ಗುತ್ತಿ ಕ್ಷೇತ್ರಕ್ಕೆ ಯಚ್ಯುತ್ತಮುನು ಆರ್ಥಿಯಲಿ ಪ್ರಾಪ್ತನಾಗುತ್ತಿರಲು
ಉತ್ಸವದ ಕಾಲದಲಿ ಸತ್ವಶಾಲಿಗಳಾದ ಜನರು ಜಗ್ಗುವದಕೆ
ಯತ್ನ ಪ್ರಯತ್ನಗಳ ಮಾಡಿದಾಗ್ಯೂ ಕಿತ್ತದೇ ಗಾಲಿಗಳು
ರಥವು ಇದ್ದಲ್ಲಿಯೇ ಸ್ವಸ್ಥ ನಿಲ್ಲಲು ಆಗ್ಗೆ ಸತ್ಯಬೋಧಾರ್ಯರು
ಹಸ್ತದಿ ಮುಟ್ಟಿದ್ದ ಮಾತ್ರಕ್ಕೆ ವಾಹನವು ಸತ್ವರದಿ ಪಾದಗಟ್ಟಿಗೆ
ಉರಳಿತು

(ಬಂದು ನಿಂತಿಹ ನೋಡಿ ಎಂಬಂತೆ)

ಯೋಗಿವರರ ಚರಿತ್ರ ಪ್ರತಿಯೊಂದು ಚಿಂತಿಸಲಾಗಿ ಪರಮ ಪವಿತ್ರ
ಇದನು ಪೇಳಲು ಜೋಗಿ ಜಡ ದುಶ್ಚಿತ್ತ ನಾನೆಂತು ಶಕ್ತ ಬಾಗಿ
ಭಜಿಸಲು ಜನರ ಮನಸಿನ ರಾಗ ದ್ವೇಷಾದ್ಯಖಿಲ ದೋಷವ
ಹೋಗಲಾಡಿಸಿ ಬೇಗ ಜ್ಞಾನವಿ ರಾಗ ಭಕುತಿಯನಿತ್ತು ಪಾಲಿಪ
|| ಅ ||

ಹರಿ ಹರದೊಳೀ ಯೋಗಿ ತುಂಗಾ ತಟದ ರಘುವರನ ಪೂಜಿಪನಾಗಿ
ಇರುತಿರಲು ಸ್ವಪ್ನದಿ ಸುರ ನದಿಯು ತಾನಾಗಿ ಮಂಗಳ ಮಯಾಕೃತಿ
ಧರಿಸಿದಂಥವಳಾಗಿ ಪ್ರತ್ಯಕ್ಷಳಾಗಿ ತ್ವರದಿ ಸವಣುರ ಪುರಕೆ ವತ್ಸನೆ
ತೆರಳು ನೀ ನಲ್ಲಿರುತ ನಿಜರಿಗೆ ನಿರುತ ನ್ಯಾಯ ಸುಧಾದಿ ಪಾಠದಿ
ನಿರತವಾಗಿರುವಂಥ ಕಟ್ಟೆಯ ನೆರೆಯ ಔದುಂಬರ ತರುವಿನೊಳು
ಪರಮ ಪುಣ್ಯಪ್ರವಾಹ ರೂಪದಿ ಬರುವೆನೀನುಡಿ ಸ್ಥಿರವು ಎನ್ನುತ
ಹರಿಸಿ ಸಿರದಲಿ ಕರವನಿಟ್ಟಳು || ೧ ||

ನಿದ್ರೆಯಿಂದೆದ್ದೀತಾ ಭಾಗೀರಥಿಯು ಪೇಳಿದ್ದುದನು ಸ್ಮರಿಸುತ್ತಾ ಸವಣೂರ
ಕ್ಷೇತ್ರಕೆ ಸದ್ಮದಲಿ ತೆರಳುತ್ತಾ ವಿದ್ವಾಂಸರಿಗೆ ಶ್ರೀಮಧ್ವ ಸತ್ಸಿದ್ಧಾಂತಾ
ಉಪದೇಶಿಸುತ್ತಾ ಇದ್ದ ಕಟ್ಟೆಯ ಸಮ್ಮುಖದಲಿಭಿವೃದ್ಧ ಔದುಂಬರ
ಸುವೃಕ್ಷದ ಊರ್ಧ್ವ ಟೊಂಗೆಯನೊಡೆದು ವಿಷ್ಣು ಪದೋದ್ಭವಳು
ದಸರ ಮುಹೂರ್ತದಿ ಉದ್ಭವಿಸೆ ಆಶುಧ ಹೃದ್ಯ ಸಮೃದ್ಧ ಜಲವನು
ಸದ್ಗುರೂತ್ತಮ ಸದ್ಮದಲಿ ಕಂಡಮಿತ ಸೌಖ್ಯ ಸಮುದ್ರದಲಿ ಸಮ್ಮಗ್ನನಾದನು
|| ೨ ||

ಹರುಷದಿಂದಲಿ ಗಂಗಾ ದೇವಿಯನು ಕುಂಕುಮ ಅರಿಷಿಣಾಕ್ಷತಗಂಧಾ
ಪೂಮಾಲೆ ವಸ್ತ್ರಾಭರಣ ಬಾಗಿಣದಿಂದಾ ಸಂಭ್ರಮದಿ ಸಂಪೂಜಿಸುತ
ಮುನಿಕುಲವಂದ್ಯ ಆನಂದದಿಂದ ತರುತಲದ ಭೂಮಿಯೊಳು ತುಂಬಿದ
ಸುರನದಿಯ ಶುಭಪ್ರವಾಹದಿ ನೆರೆದ ಪರಿವಾರದ ಸಹಿತ ಗುರುವರನು
ಸ್ನಾನವ ಮಾಡಿ ದಿನ ದಿನ ಹರಿಯ ಪೂಜಯನಲ್ಲಿಯೆ ಹತ್ತಿರದ
ಕಟ್ಟೆಯ ಮೇಲೆ ಮಂಟಪವಿರಿಸಿ ಮಾಡುತ ಕರೆದ ಬಾವಿಯ
ಪರಮ ವಿಷ್ಣುತೀರ್ಥವೆಂದು || ೩ ||

ಒಮ್ಮೆ ಗೀತಾಭಾಷ್ಯ ಪಾಠವನು ಇಲ್ಲಿಯೆ ಧರ್ಮಪಾಲನು ಶಿಷ್ಯವೃಂದಕ್ಕೆ
ಪೇಳುತ ಸಮುದ್ರದಲು ಪವಿಷ್ಟನಿರುತಿರಲು ಬಂದಿತು ಒಮ್ಮೆಲೆ
ಬಲುಪುಷ್ಟ ವಾನರ ಶ್ರೇಷ್ಠ ಕರ್ಮಶೇಷದಿ ಹೀಗೆ ವಾನರ ಜನ್ಮ
ತಾಳಿದವನು ಕೊನೆರಿ ಸೋಸ್ಲಿಗ್ರಾಮದ ಜ್ಞಾನಿ ಎಂಬುವ ಮರ್ಮವನು
ಯೋಗೀಶ ಲಕ್ಷಿಸಿ ಸಮ್ಮುಖದಿ ಪಾಠಕ್ಕೆ ವಾನರನನ್ನು ಕೂಡಿಸಿ ತೀರ್ಥ
ಕರುಣಿಸಿ ಸೌಮ್ಯದಿಂದುದ್ಧರಿಸಿ ಪೊರೆದನು ಸಾಮ್ಯವುಂಟೇ ಇವನ
ಕರುಣಿಗೆ || ೪ ||

ಯತ್ಯಧೀಶಗೆ ಮೂರು ಪ್ರಶ್ನೆಗಳನೊಬ್ಬ ಗೃಹಸ್ಥ ಕೇಳಿದ ಪೇಳು
ಈ ಮಠದ ಘನ ಸಂಪತ್ತು ಕಾಯುವರಾರು ಇಷ್ಟಡಿಗೆ ಮಾಳ್ಪ
ಸಮರ್ಥ ಪಾಚಕರಾರು ಪೂಜಿಪರದಾರು ಉತ್ತರಗಳನಿತ್ತ ಯೋಗಿಯು
ಶಕ್ತಿಯಿಂದಲಿ ಸ್ವಪ್ನ ತೋರಿಸಿ ಮತ್ತು ರತ್ನದ ಖೋಲಿಯನು

ಕಾಯುತ್ತಲಿದ್ದನು ಶಕ್ತ ಹನುಮನು ಅತ್ತ ಅಡಿಗೆಯ ಸೌಟು
ಕುಂತೀಪುತ್ರ ಧರಿಸಿದ ರಂಗನಾಥನ ನಿತ್ಯ ಪೂಜೆಯ ಮಧ್ವಮುನಿ
ಮಾಡುತ್ತಲಿದ್ದನು ಭಕ್ತವರ್ಯನು ॥ ೫ ॥

-----

ರುದ್ರನು ಶಿರಸಾ ಧರಿಸಿದ ಮಧ್ವಾಗಮವೆಲ್ಲಿ ಅಲ್ಲಿಯೇ ತಾನೆನುತ
ಸದ್ಗುರುವು ಪಾಠ ಹೇಳುತ ಇದ್ದಲ್ಲಿಗೆ ಧಾವಿಸಿದಳು ಗಂಗಾಮಾತೆ
॥ ೧ ॥

ಊಟಿಯು ಇದ್ದೀತು ಇಲ್ಲವೆ ಮಾಟವು ಇದ್ದೀತು ಎಂಬ ಹುಡುಗಾಟಿಗೆಯ
ಕಾಟವ ಮೀಟಲು ಇಳಿದಳು ತಾ ಟೊಂಗೆಯೊಳ್ ತ್ರಿವಿಧ ತಾಪ
ದಾಟಿಪ ಮಾತೆ ॥ ೨ ॥

ಎಂದೆಂದಿಗೂ ಬಿಡದೆ ತನ್ನಯ ತಂದೆ ಶ್ರೀರಂಗನಾಥನೊಂದಿಸುತಿಪ್ಪ
ಕಂದನಿವನೆಂದು ಧಾವಿಸಿ ಬಂದಳು ವಾತ್ಸಲ್ಯದಿಂದ ಗಂಗಾ ಮಾತೆ
॥ ೩ ॥

(ವಚನ) ಸವಣೂರಪುರದಿ ಕಂಠೇರಾಯನೆಂಬಂಥ ಸುವಿಶುದ್ಧ
ಭಕ್ತಿವೈಭವ ಪೂರ್ಣನಾದಂಥ ಅವನಿಪಾಲನು ಸ್ವಾಮಿ
ಶ್ರೀ ಸತ್ಯಬೋಧರನು ವಿವಿಧ ಪ್ರಕಾರದಲಿ ಸೇವಿಸಿದನು
ದಿವಸ ದಿವಸದಲಿವರು ಮಾಲ್ಪ ಧ್ಯಾನಾರ್ಚನೋತ್ಸವಗಳನು
ನೋಳ್ಪುದಕೆ ತವಕದಿಂಬರುತಿರ್ದ ಕವಿಗಳನು ವಿಪ್ರರನು
ವಿವಿದಧಲಿ ಸತ್ಕರಿಸಿ ಇವರ ಕಾರುಣ್ಯ ಭಾಗ್ಯವ ಪಡೆದನು
॥ ೧ ॥

ಈ ಋಷೀಶ್ವರರೊಮ್ಮೆ ತಮ್ಮ ದರುಶನಕಾಗಿ ಹಾರೈಸಿ
ಬರುತಿರ್ದ ಜಗನ್ನಾಥ ದಾಸರನು ದೂರದಲ್ಲಿದ್ದರೂ

ಯೋಗದಿಂದಲಿ ನೋಡಿ ತೀರಥವ ಕೊಡುವದನು
ತಡೆಹಿಡಿದನು ದಾರಿ ಕಾಯುತಲಿಹರು ಗುರುಗಳೆಂಬುದನತ್ತ
ದೂರದಿಂದಲೆ ಯೋಗದೃಷ್ಟಿಯಲಿ ನೋಡುತ್ತ ಧಾವಿಸುತ
ದಾಸವರ್ಯರು ಬಂದು ನಮಿಸಿದರು ಈರ್ವ ಗುರು ಶಿಷ್ಯ
ಯೋಗಿಗಳಿಗಭಿನಮಿಪೆ ॥ ೨ ॥

-----

(ಹರಿ ಶರಣು ಮಧ್ವ ಗುರು ಶರಣೆಂಬೊದೇ ಎಂಬಂತೆ)

ಶಿಷ್ಯೇಷ್ಟನಿವನ ಉತ್ಕೃಷ್ಟ ಮಹಿಮೆಯಿಂದ ಶಿಷ್ಟರಿಗೆ ಪರಿತೋಷ
ಹೊಟ್ಟೆಕಿಚ್ಚುರಿವಂಥ ದುಷ್ಟರಿಗೆ ಮಾತ್ರ ಹುಟ್ಟಿತು ಪ್ರದ್ವೇಷ ॥ ೧ ॥

ಭಾಗವತರು ಭಜಿಸಿ ಯೋಗಿಯ ಪಡೆದರು ಜ್ಞಾನ ಭಕ್ತಿವಿರಾಗ
ಗೂಗಿ ಜನರಿವರಿಗೆ ವಿಷವನ್ನು ಹಾಕಲು ಹೂಡಿದರುದ್ಯೋಗ
॥ ೨ ॥

ಚಿಕ್ಕ ನೈವೇದ್ಯದಿ ರಕ್ಕಸ ಮತಿಗಳು ವಿಷವನ್ನು ಬೆರಸಿದರು
ಮುಖ್ಯ ಗುರುವು ಅದನ್ನರ್ಪಿಸುತಲಿ ಸಾರಭೋಕ್ತ್ರವ ಸ್ಮರಿಸಿದರು
॥ ೩ ॥

ಶ್ರೀಲೋಲನ ಕಂಠ ನೀಲವಾದದ್ದು ಯತಿಪಾಲನು ನೋಡಿದನು
ಖೂಳ ಜನರ ಕುಹಕಜಾಲವಿದೆಂದು ತತ್ಕಾಲ ನಿಶ್ಚಯಿಸಿದನು
॥ ೪ ॥

ದ್ವಾದಶ ಸ್ತೋತ್ರವ ಸಾಧುವರೇಣ್ಯನು ಆದರದಿ ಪಠಿಸಿದನು
ಆದಿರಾಮನಿಗೆ ನಿವೇದಿಸಿ ಪಾದಕ್ಕೆ ಮೋದದಿ ನಮಿಸಿದನು ॥ ೫ ॥

ಕೂಡಿದ ಜನರು ಆ ಗೂಢವ ತಿಳಿಯುತ್ತ ಬೇಡಿಕೊಂಡರು ಗುರುವಿಗೆ
ಬೇಡ ಬೇಡಿರಿ ಮುಟ್ಟಬೇಡಿರಿ ಪಾಯಸ ಗೂಢ ವಿಷವಿದೆಂದರು
|| ೬ ||

ಎಷ್ಟೆಷ್ಟು ಜನರು ಹಟಪಟ್ಟು ಪೇಳಿದರೇನು ಶ್ರೇಷ್ಠ ರಾಮಭಕ್ತನು
ಬೆಟ್ಟದ ರಂಗನುಚ್ಛಿಷ್ಟವಿದೆಂದು ಯಥೇಷ್ಟ ಭುಂಜಿಸಿದನು || ೭ ||

(ವಚನ) ಸಿರಿ ರಾಮಚಂದ್ರಮಮ ಕರುಣಾಮೃತದ ಬಲದಿ
ಗರಳವದು ಈ ಯೋಗಿವರನ ಜಠರಾಗ್ನಿಯಲಿ
ಪರಿಪಕ್ವವಾಗುತ್ತ ಅಮೃತಮಯ ರೂಪದಲಿ ಪರಿಣಮಿಸಿತೆ
ನೆಂಬೆನಚ್ಚರಿಯನು ಸುರರೆ ಇವರೆಂಬುದನು ಮರೆತ ನರಬುದ್ಧಿ
ವೈದ್ಯರು ಮಾತ್ರ ಮನದಿ ಗಾಬರಿಗೊಂಡು ವಿಷಬಾಧೆ
ಹರಡದಿರಲೆಂದು ರಾತ್ರಿಗಳೊಳೆಚ್ಚರದಿಂದ ಇರಿರೆಂದು
ಕರ ಮುಗಿದು ಪ್ರಾರ್ಥಿಸಿದರು || ೧ ||

ಭಕ್ತಿಪೂರ್ವಕವಾದ ಭೃತ್ಯರ ಪ್ರಾರ್ಥನೆಯ ಚಿತ್ತೈಸಿ ಪರಮ
ಹಂಸೋತ್ತಮರು ದಯದಿಂದ ನಿತ್ಯದ ಶ್ರೀ ಮೂಲರಾಮ
ಸೀತಾರ್ಚನೆಯ ರಾತ್ರಿಯಲ್ಲಿಯೇ ಮಾಡಲಾರಂಭಿಸಿದರು
ಶತ್ರು ಬುದ್ಧಿಗಳಾಗ ನಿಂದಿಸುತ ಈ ಯತಿಯು ಹೊತ್ತಿಲ್ಲದಂತೆ
ಪ್ರತಿಷಿದ್ಧವಹ ಈ ರಾತ್ರಿ ಹೊತ್ತಿನಲಿ ಪೂಜೆ
ಮಾಡುತ್ತಿರುವರೆನ್ನುತ್ತ ಮಾತ್ಸರ್ಯವನ್ನು ಕಾರಿದರು ಖಳರು
|| ೨ ||

ಉದ್ಧಟರು ಮಾಡುತ್ತಲಿದ್ದ ನಿಂದೆಯನಿದನು ಸದ್ಯದಲಿ
ಪರಿಹರಿಸಿ ಸದ್ಭಕ್ತರೊಳು ತನ್ನ ಶುದ್ಧ ಭಾವವನು
ಸಂಸಿದ್ಧಗೊಳಿಸಲು ಶಾಸ್ತ್ರ ವಿದ್ಯಾಧಿಪಾಲಕನು ಬುದ್ಧಿ ಮಾಡಿ
ಅರ್ಧ ರಾತ್ರಿಯೊಳಮಾವಾಸ್ಯದಲಿ ರಾಮನಿಗೆ ಶುದ್ಧಿಯಲಿ
ಮಾಡ್ದ ಆರ್ತಿಕ್ಯ ಬೆಳಕನ್ನು ನೆರೆದಿದ್ದ ಜನಸಂದಣಿಗೆ

ಚೋರ್ದ ಸಮಯದಿ ನಭದಿ ಪ್ರದ್ಯೋತಿಸಿದನಾಗ
ಮಾರ್ತಾಂಡನು ॥ ೩ ॥

(ಯಾಕೆ ನಿರ್ದಯನಾದೆಲೋ ಎಲೋ ದೇವನೆ ಎಂಬಂತೆ)

ತರಣಿಬಿಂಬವಾ ತೋರಿದಾ ಗುರುರಾಜಾ ॥ ಪ ॥
ಧರಣಿಗಚ್ಚರವಾಗೆ ಸರಿ ಅರ್ಧರಾತ್ರಿಯೊಳು ॥ ಅ ಪ ॥

ಮುನ್ನ ಮಾರ್ಕಂಡೇಯ ಮುನಿಗೆ ಶ್ರೀಹರಿಯು ತಾ
ಹನ್ನೆರಡು ಸೂರ್ಯರ ತನ್ನುದರದಿ
ಘನ್ನ ಪ್ರಲಯರಾತ್ರಿಯಲ್ಲಿ ತೋರಿದ್ದನ್ನು
ಇನ್ನೀಗ ತಿಳುಹಲೋ ಎನ್ನುವ ಕಾರಣ ॥ ೧ ॥

ಮೂಢಲೋಕದ ಒಳ ಹೊರಗಿನ ಕತ್ತಲೆ
ದೂಡುವ ಕೆಲಸದಿ ದೇವರಿಂದ
ಕೂಡೇ ನೇಮಿತರಾಗಿ ಗಾಢ ಗೆಳೆತನದಿಂದ
ಜೋಡಾಗಿ ಕೆಲಸವ ಮಾಡಿದ್ದ ಕಾರಣ ॥ ೨ ॥

ಇಳೆಯೊಳಗೆ ಗುಡ್ಡದ ರಂಗನು ಸೂರ್ಯನ
ಕುಲದಿ ರಾಮನಾಗಿ ಇಳಿದಿರಲು
ಘಳಿಗೆ ಬಿಡದೆ ಆವನ ಭಜಿಸುವ ಯತಿಕುಲ
ತಿಲಸುಕರಿಗೆ ಸೂರ್ಯನು ಒಲಿದಿದ್ದ ಕಾರಣ ॥ ೩ ॥

(ವಚನ) ನಿತ್ಯವೂ ವೃದ್ಧಿ ಹೊಂದುತ್ತಿರುವ ಸಂಶುದ್ಧ ಭಕ್ತಿಯಿಂದಿಂತು
ಶ್ರೀಮೂಲ ಸೀತಾರಾಮ ಶ್ರುತ್ಯಧೀಶರ ಪೂಜಿಸುತ್ತ ಶ್ರೀ
ಮಧ್ವಗುರು ಶಾಸ್ತ್ರ ರಾಜ್ಯವ ಪಾಲಿಸುತ್ತ ಮುದದಿ
ಮುಕ್ತಿಗುತ್ತಮದಾರಿ ಭಕ್ತವರ್ಗಕೆ ತೋರಿ ಅರ್ಥಿಗಳ
ಮನದಭೀಷ್ಟಾರ್ಥವೆಲ್ಲವ ಬೀರಿ ಧಾತ್ರೀತಲಕೆ ತಾ
ಪ್ರಾಪ್ತನಾದವತಾರ ಚಿತ್ರ ಚಾರಿತ್ರವ ಸಮಾಪ್ತಿಗೊಳಿಸಿ
॥ ೧ ॥

ಮತ್ತೆ ಸದ್ಭಕ್ತಿ ವೈರಾಗ್ಯ ತತ್ವಜ್ಞಾನ ಯುಕ್ತ ಶ್ರೀರಾಮಚಂದ್ರಾರ್ಯ
ನಾಮಕ ಭೂಸುರೋತ್ತಮಗೆ ಪ್ರೀತಿಯಲಿ ಯತ್ಯಾಶ್ರಮವನಿತ್ತು
ಸತ್ಯಸಂಧನು ಎಂದು ಹೆಸರನಿಟ್ಟು ಉತ್ತಮ ಪ್ರಣವ
ಮಂತ್ರೋಪದೇಶವ ಕೊಟ್ಟು ಪುತ್ರನಿಗೆ ಪೀಠಾಧಿಪತ್ಯ
ಒಪ್ಪಿಸಿಕೊಟ್ಟು ಹತ್ತು ಸಂವತ್ಸರಾಯುಷ್ಯ ದಯಪಾಲಿಸಿದಾ
ವಾತ್ಸಲ್ಯದಿಂದ ಈ ನೂತನ ಯತಿಗೆ ॥ ೨ ॥

-----

(ಯಾವ ರೀತಿಯಿಂದ ನೀನೆನ್ನ ಸಲಹುವಿ ಎಂಬಂತೆ)

ಪುಣ್ಯಪಾದರ ಮಹಿಮೆ ಸಣ್ಣಬುದ್ಧಿಯು ನಾನು
ಇನ್ನೆಂತು ಬಣ್ಣಿಸಲಿ ಮಾನ್ಯ ಕವಿಗಳಿಗೆ ಇದನ್ನು
ಬಣ್ಣಿಸುವದಕೆ ಇನ್ನಂಟೇ ಸಾಮರ್ಥ್ಯ ಇದು ಸತ್ಯ ॥ ೧ ॥

ದುಶ್ಚರಿತನರರು ಬಚ್ಚಿ ಮಾಡಿದ ಪಾಪ ತಕ್ಷಣದಲಿ
ಇವರು ನಿಶ್ಚಯಿಸುತ ಯೋಗ ಚಕ್ಷುಷ ಬಲದಿಂದ
ಬಿಚ್ಚಿ ಪೇಳುತಲಿದ್ದರು ಮುನಿವರರು ॥ ೨ ॥

ಇವರ ಕೃಪಾಮೃತ ಲವ ಮಾತ್ರ ಬಲದಿಂದ
ಅವಧೂತವರ್ಯನೆನೆಸಿ ವಿವಿಧವಾದಷ್ಟೈಶ್ವರ್ಯವ ಪಡೆದು
ಮೆರೆದನು ಭುವಿಯೊಳು ಸತ್ಯಸಂಧ ಯತೀಂದ್ರಾ ॥ ೩ ॥

ರಾಮಚಂದ್ರನ ಪಾದ ಪ್ರೇಮದಿ ಧ್ಯಾನಿಸುತ
ಶೋಭನಕೃದ್ವರ್ಷದಿ ಭೂಮಿಯಿಂದ ಪರಂಧಾಮಕೆ
ತೆರಳಿದ ತಾ ಮುನಿಕುಲವರ್ಯ ಬೋಧಾರ್ಯ ॥ ೪ ॥

ಅಂದಿನ ದಿನ ಸತ್ಯಸಂಧ ಯೋಗಿಯು ಭಕ್ತಿಯಿಂದ
ಸತ್ಯಬೋಧರ ವಂದ್ಯ ವಿಗ್ರಹವನ್ನು ಪರಮ
ಸುಂದರವಾದ ವೃಂದಾವನದಿ ಸ್ಥಾಪಿಸಿ ನಮಿಸಿ ॥ ೫ ॥

ಕ್ಷೀರಘೃತಶರ್ಕರಾ ಆರು ರಸಪಕ್ವಾನ್ನವ ಧಾರುಣೀ
ಸುರರಿಗುಣಿಸಿ ಸೂರಿಗಳಿಗೆ ದಾನ ಸೂರಿಗ್ಯೆದು ಗುರು
ಸಮಾರಾಧನೆಯನು ಮಾಡಿದಾ ಶ್ರೀ ಪಾದಾ || ೬ ||

ಸತ್ಯಸಂಧರಿಂದ ನಿತ್ಯ ಪೂಜಿತರಾದ ಸತ್ಯಬೋಧರ
ಕಾರುಣ್ಯ ಛತ್ರದೊಳಿದ್ದಂಥ ಭಕ್ತರ್ಗೆ ಘೋರ
ತಾಪತ್ರಯ ಅತಿ ದೂರ ಪರಿಹಾರ || ೭ ||

ಒಂದೇ ಮನದಿಂದಿಪರ ವೃಂದಾವನದ ಬಳಿ
ಪೊಂದಿದ್ದವರ ಅಭೀಷ್ಟ ಒಂದೂ ಬಿಡದೆ ಸಿದ್ಧಿ
ಹೊಂದುವವದರಲ್ಲಿ ಸಂದೇಹವನ್ನು ಕಾಣೆ ಹರಿಯಾಣೆ
|| ೮ ||

ಅಂಧರಿಗೆ ನೇತ್ರವು ಬಂಜೆಗೆ ಪುತ್ರರು ಖಂಜರಿಗೆ
ಕಾಲುಗಳು ಅಂಜಿದ್ದವರ ಭಯ ಭಂಜನವಾಗುವದು
ಸಂದೇಹವಿದಕೆ ಇಲ್ಲ ಹರಿ ಬಲ್ಲ ಮೌನಿವರ್ಯರ
ಸನ್ನಿಧಾನ ಸ್ಥಾನದಿ ಪವಮಾನ ಸೌಸ್ತ್ರವ || ೯ ||

ಪಠಿಸೆ ಹೀನೆ ಬುದ್ಧಿಯು ಸಹ
ಜ್ಞಾನಿವರ್ಯನೆನೆಸಿ ಮಾನ್ಯನಾಗುವನು
ಬೇಗ ಕೇಳೀಗ || ೧೦ ||

ಒಂದು ಪ್ರದಕ್ಷಿಣೆ ಒಂದೆ ನಮಸ್ಕಾರ ವೃಂದಾವನಕೆ
ಮಾಡಲು ಅರಿದು ಗಂಗಾ ಕೃಷ್ಣೆ ಸಿಂಧು ಕಾವೇರಿಯೊಳು
ಮಿಂದಕ್ಕಿಂತಧಿಕ ಪುಣ್ಯ ಆಗಣ್ಯ || ೧೧ ||

ಯಾಕೆ ಕಾಮಧೇನು ಯಾಕೆ ಕಲ್ಪತರು ಬೇಕಿಲ್ಲ
ಚಿಂತಾಮಣಿ ಬೇಕಾದಿಷ್ಟವ ಸುರಿಸಿ ಸಾಕಿ
ಜೋಕೆಮಾಳ್ಪ ಈ ಕೃಪಾಳುವೇ ಸಾಕು ನಿಜವಾಕು
|| ೧೨ ||

ಸಪ್ತಸಮುದ್ರಗಳು ಮಾರ್ತಾಂಡ ಚಂದ್ರರು
ನಿತ್ಯರಾಗಿರುವಂತೆಯೇ ಸತ್ಯಬೋಧ ಗುರುಸ್ತೋತ್ರ
ಪದ್ಯಗಳಿವು ಸುಸ್ಥಿರದಲಿ ಮೆರೆಯಲಿ ಧರೆಯಲ್ಲಿ ॥ ೧೩ ॥

ತತ್ತ್ವೇಶ ಸುರರೆಮ್ಮ ಚಿತ್ತದೊಳಿದ್ದು ಶ್ರೀ ಸತ್ಯಬೋಧರ
ಪಾಪದಿ ಭಕ್ತಿ ಭಾವನೆಯನ್ನು ಇತ್ತು ಪಾಲಿಸೆಂದು
ಪಾಲಿಸೆಂದು ಪ್ರಾರ್ಥಿಸುವೆನಂಗಲಾಚಿ ಕೈ ಚಾಚಿ ॥ ೧೪ ॥

ಮೂಢ ಮಾಡಿದ್ದೆಂದು ಹಾಡು ನನ್ನದು ತುಚ್ಛ
ಮಾಡರು ಸಾಧು ಜನರು ನೋಡಿ ಗುರುಮಹಿಮೆಯಿಂ
ಕೂಡಿದಮೃತವೆಂದು ಪಾಡಿ ಸೇವಿಸಿ ಸುಖಿಪರು
ಸಜ್ಜನರು ॥ ೧೫ ॥

ಇಟ್ಟಾಣೆ ಈ ಗುರು ಶ್ರೇಷ್ಠರ ಕಾರುಣ್ಯ ದುಷ್ಟಿಯ
ಪಡೆದವರ ಬೆಟ್ಟದ ಶ್ರೀರಂಗನಾಥನು ಮುಕುತಿಯ
ಕೊಟ್ಟು ಪರಿ ಪಾಲಿಸುವಾ ಶ್ರೀಧವಾ ॥ ೧೬ ॥

-----

(ಮೋಸ ಹೋದೆನಲ್ಲ ಸಕಲವು ವಾಸುದೇವ ಬಲ್ಲ ಎಂಬಂತೆ)

ಸತ್ಯಬೋಧ ಗುರುವೆ
ನಮಿಸುವೆ ಭಕ್ತ ಕಲ್ಪತರುವೆ ॥ ಪ ॥

ಭಕ್ತಿ ವಿರಕ್ತಿಗಳಿತ್ತು ಪಾಲಿಪುದು
ಎತ್ತಿ ಕರಗಳೆರಡನು ಮೊರೆ ಇಡುವೆ ॥ ಅ ಪ ॥

ಕತ್ತಲೆಯಲಿ ಬಿಸಿಲು ತೋರ್ದ ಮಹಾತ್ಮನೆ
ಮೊರೆ ಕೇಳು ಕತ್ತಲೆಯಂತಿಹ ಮೋಹವ ಕೀಳು
ಭಕ್ತಿಯ ಬೆಳಕನು ತೋರೋ ದಯಾಳು ॥ ೧ ॥

ಲಕ್ಷ ಹೂಗಳನ್ನು ಲತೆಗಳು ತಕ್ಷಣ
ಸುರಿಸಿದವು ಲಕ್ಷ್ಮೀಶನ ಪೂಜಕನೆ ನಿನ್ನ
ಪ್ರತ್ಯಕ್ಷವಾದಂಥ ಯೋಗ ಶಕ್ತಿಯಲಿ ॥ ೨ ॥

ತಂಜಾವರದಲ್ಲಿ ಮಾಯ್ಗಳ ಕುಂಜರ ಪುಂಜವನು
ಅಂಜಿಕೆ ಇಲ್ಲದೆ ಭಂಜಿಸಿ ನೀನು
ಪ್ರಭಂಜನ ಮತವನು ಸಂಸ್ಥಾಪಿಸಿದೆ ॥ ೩ ॥

ವಿಷಕಂಠನನೊಲಿಸಿ ಮೃಕಂಡುಜ ಋಷಿಯನ್ನನುಕರಿಸಿ
ವಿಷವ ಸುಖದಿ ಜೀರ್ಣಿಸಿದೆ ಗುರುವೆ ದುರ್ವಿಷಯ
ವಿಷದ ಕಸಿವಿಸಿಯನು ಬಿಡಿಸೈ ॥ ೪ ॥

ವರದೇಂದ್ರರು ಬಾಗಿ ನಿನ್ನಯ ಚರಣಕೆ ಮೊರೆ
ಹೋಗಿ ಕರುಣಾ ದೃಷ್ಟಿಯ ಪಡೆದ ಕಾರಣ
ಧರಣಿಯೊಳಗೆ ಸಂಸ್ಮರಣಿಯರಾದರು ॥ ೫ ॥

ಧೀರೇಂದ್ರರು ನಿತ್ಯ ನಿನ್ನನು ಭಾವದಿ ಭಜಿಸುತ್ತ
ಧಾರುಣಿಯೊಳು ತಮ್ಮಾರಾಧರಿಕರಿಗೆ
ಸಾರಸೌಖ್ಯಗಳ ಸೂರಿಗೈವರು ॥ ೬ ॥

ಕೋನೇರಿಯ ದ್ವಿಜನು ಹೊಂದಿರೆ ವಾನರ
ಜನ್ಮವನು ನೀನೆ ತೀರ್ಥವ ಪಾನ ಮಾಡಿಸಿ
ಹೀನ ಯೋನಿಯನು ಹಾನಿಗೈಸಿದೆ ॥ ೭ ॥

ಆನೆ ಶ್ರೀಮಠದ್ದು ತನ್ನಯ ಸೇನೆಯೊಳಿದದ್ದು
ಕಾಣುತ ಹೆದರ ತಾನೇ ಶ್ರೀಮಠಕ್ಕಾನೆಗಳೆರಡನು
ಕಾಣಿಕೆಯಿತ್ತ ॥ ೮ ॥

ನಾಣ್ಯದ ಮೇಲಿದ್ದ ನಿನ್ನ ಮಾನ್ಯ ಅಂಕಿತಮುದ್ರಾ
ಮನ್ನಿಸಿ ಟೇಪುವು ಅಂಜಿ ಮುಟ್ಟದೆ
ಸನ್ನಿಧಿಗವುಗಳ ಮರಳಿ ಕಳುಹಿದಾ ॥ ೯ ॥

ಟೊಂಗೆಯಿಂದಾ ಇಳಿದು ಬಂದಳು ಗಂಗೆಯು
ನಿನಗೊಲಿದು ಗಂಗಾಪಿತ ಶ್ರೀರಂಗನಾಥನ
ಅಂಘ್ರಿ ಸಮೀಪಕೆ ಪೊರೆ ಕರೆಯೊಯ್ದು ॥ ೧೦ ॥

(ಶ್ರೀತತ್ವವಾದ ಮತವಾ ಎಂಬಂತೆ)

ಏಳಯ್ಯ ಗುರುವರೇಣ್ಯ
ಏಳು ಶ್ರೀ ಗುರುವರ್ಯಾ ಶ್ರೀ ಸತ್ಯಬೋಧಾರ್ಯ
ಏಳು ಮಾಯಾ ತಮವ ಖಂಡಿಸುವ ಖರ ಸೂರ್ಯ
ಏಳು ಪಾಪಾಟವಿಗೆ ಕಾಲಾಗ್ನಿ ಸಮಚರ್ಯಾ
ಏಳಯ್ಯ ಯೋಗಿಗೇಯಾ ॥ ಅ ॥

ಆತುರದಿ ದರುಶನಕೆ ಕಾದಿದ್ದ ಬ್ರಾಹ್ಮಣರ ವ್ರಾತಕ್ಕೆ
ನಿನ್ನ ಪದ ಪ್ರೀತಿಯಿಂದಲಿ ತೋರಿ ಪಾತಕಗಳಳಿದು
ಸಂತೋಷಗಳಿಸಲು ಬೇಕು ನಾಥನೇ ಬೇಗನೇಳೈ
ಹಾತೊರೆದು ದೇವ ದರುಶನಕಾಗಿ ಸ್ವರ್ಗದಿಂದೈ
ತಂದ ಸುರಗಣಕೆ ಮೂಲರಾಮನ ದಿವ್ಯಮೂರ್ತಿಯನು
ತೋರ್ದವರ ಪ್ರೀತಿಯ ವಿಶೇಷಕ್ಕೆ ಪಾತ್ರ ನೀನಾಗಬೇಕು
॥ ೧ ॥

ವಿಷ್ಣುನಿಂದಕ ಮತಗಳನ್ನು ಖಂಡಿಸಬೇಕು ವಿಷ್ಣು
ಸರ್ವೋತ್ತಮತ್ವವನು ಸ್ಥಾಪಿಸಬೇಕು ವಿಷ್ಣು
ಪದಿಯನ್ನೊಲಿಸಿ ನೀನಿರ್ದ ಸವಣೂರಧಿಷ್ಠಕ್ಕೆ
ತರಲು ಬೇಕು ವಿಷ್ಣು ಭಕುತಿಯನಿತ್ತು ಶಿಷ್ಯ
ಸಂರಕ್ಷಣದಿ ನಿಷ್ಣಾತನೆನಿಸಬೇಕು ॥ ೨ ॥

ಪಶುಬುದ್ಧಿ ಖಲರು ಪಾಯಸದಿ ಮಿಶ್ರಿಸಿದಂಥ
ವಿಷದ ದೋಷವನು ದ್ವಾದಶ ಸ್ತೋತ್ರಪಠಣದಿಂ
ಪುಸಿಗೊಳಿಸಬೇಕು ಸಂತಸದಿ ಜೀರ್ಣಿಸಬೇಕು
ಋಷಿವರ್ಯನೆನಿಸಬೇಕು ನಿಶೆಯಲ್ಲಿ ರಾಮಚಂದ್ರನನು
ಪೂಜಿಸಬೇಕು ಬಿಸಲನ್ನು ಅರ್ಧರಾತ್ರಿಯಲಿ
ತೋರಿಸಬೇಕು ಹೆಸರಾದ ರಂಗನಾಥನ
ದಾಸನೆಂದೆನಿಸಿ ವಸುಧೆಯೊಳು ಮೆರೆಯಬೇಕು ॥ ೩ ॥

(ಮಂಗಳ ಮನ್ಮಥ ಕೋಟಿ ಲಾವಣ್ಯ ಎಂಬಂತೆ)

ಮಂಗಳ ಗುಡ್ಡದ ರಂಗನಾಥನಿಗೆ
ಮಂಗಳಂ ಜಯಮಂಗಳಂ ॥ ಅ ॥

ದ್ವಾಪರಯುಗದಲ್ಲಿ ಗೋಪಾಲ ಮೊದಲಾದ
ಭೂಪಾಲರಿಂದ ಪೂಜಿತನಾದ ದೊರೆಗೆ ॥ ೧ ॥

ರಂಗಧಾಮನೆಂಬ ವಿಪ್ರಗೆ ವರವಿತ್ತು
ರಂಗಕ್ಷೇತ್ರದಲ್ಲಿ ಕಂಗೊಳಿಸುವಗೆ ॥ ೨ ॥

ಸ್ಕಂದಪುರಾಣಾದಿಗಳಿಂ ವರ್ಣಿತನಾದ
ಇಂದಿರಾರಮಣ ಶ್ರೀರಂಗನಾಥರಿಗೆ ॥ ೩ ॥

(ಜಲಧಿಯಲಂಘಿಸಿದವಗೆ ಜಯಮಂಗಳಂ ಎಂಬಂತೆ)

ರಾಮ ಪ್ರೇಮಧಾಮನಿಗೆ ಜಯಮಂಗಳಂ
ಸ್ವಾಮಿ ಸತ್ಯಬೋಧರಿಗೆ ಶುಭಮಂಗಳಂ

ಸತ್ಯಪ್ರಿಯಾರ್ಯ ಪ್ರಿಯ ಭ್ರಾತವರ್ಯನಾಗಿ
ಇವರ ಹತ್ತಿರದೊಳಿದ್ದು ಅಖಿಳ ಶಾಸ್ತ್ರಗಳೋದಿ

ಯತ್ಯಾಶ್ರಮವನ್ನು ಪಡೆದು ಶಾಸ್ತ್ರ ಸಾಮ್ರಾಜ್ಯದಿ
ಅಭಿಷಿಕ್ತನಾದಂಥ ಗುರು ಚಕ್ರವರ್ತಿಗೆ ॥ ೧ ॥

ಕೋನೇರಿ ಬ್ರಾಹ್ಮಣಗೆ ಪ್ರಾಚೀನ ಕರ್ಮದಿಂದ
ಬಂದ ವಾನರ ಜನ್ಮವನು ತೀರ್ಥಪ್ರಾಶನದಿಂದ
ಹಾನಿಗೈಸಿ ಸದ್ಗತಿಯ ದಾನ ಮಾಡಿ ಪೊರೆದ
ಕಾಮಧೇನು ಸಮಾನನಾದ ದಾನಿವರ್ಯಗೆ ॥ ೨ ॥

ರಂಗಧಾಮನೆಂಬ ದ್ವಿಜನ ಸಾಂಗತಪಕೆ ಮೆಚ್ಚಿ
ಅವಗೆ ಕಂಗೊಳಿಸಿ ಕುಂಭ ಸಂಭವನ ಕ್ಷೇತ್ರದಿ
ತುಂಗ ಗಿರಿಶೃಂಗದಲ್ಲಿ ಅಂಗನೆ ಸಹಿತಿರುತಿಪ್ಪ
ರಂಗನಾಥನಂಘ್ರಿ ಭೃತ್ಯ ಪುಂಗವನಿಗೆ ॥ ೩ ॥

## ೩೯

**ಕರಿಯವದನಗೆ ಮೊದಲು ವಂದಿಸಿ**
ಸರಸತಿಗೆ ಶಿರಬಾಗಿ ನಮಿಸುತೆ
ಗುರುಪರಂಪರೆಗೆಲ್ಲ ಕರವನು ಮುಗಿದು ತಮ್ಮಡಿಗೆ
ಪರಮ ಗುರುವರ ಸತ್ಯಬೋಧರ
ಚರಿತೆಯನು ಮುನ್ನೊರೆವೆನಾಲಿಸಿ
ಕೊರತೆ ಕಂಡೊಡೆ ತಿದ್ದಿ ಪರಿಪುದು ಕೃಪೆಯ
ಮಾಡುತಲಿ ॥ ೧ ॥

ಇರುತಿಹುದು ಸವನಾಖ್ಯಪುರವದು
ಮೆರೆಯುತಿಹ ಕರ್ನಾಟದೇಶದಿ
ಪರಮಪಾವನ ವಿಷ್ಣುತೀರ್ಥವು ಬನದ ಮಧ್ಯದಲಿ
ಮೆರೆಯುತಿದ್ದನು ಯವನರಾಜನು

ಧರೆಯೊಳಾತನ ಮಂತ್ರಿಮಂಡಲ-
ದಿರವ ಖಂಡೇರಾಯ ಬಹಳೇ ಚತುರವಿಖ್ಯಾತ || ೨ ||

ಇಂತು ಶೋಭಿಪ ಪುರಕೆ ಗುರುಗಳ
ಸಂತಸದ ಬರವಾಯ್ತು ಪುರಜನ
ಸಂತಸಜ್ಜನರೆಲ್ಲ ಕೂಡುತಲಿದಿರುಗೊಂಡಿಹರು
ಭ್ರಾಂತವಾಯಿತು ಪುರಕೆ ಪುರವೇ
ಶಾಂತರೂಪವ ಕಾಣುತಾಗಲ-
ನಂತ ಮೂರುತಿಗರ್ಪಿಸಿದರವರರ್ಘ್ಯಪಾದ್ಯಗಳ || ೩ ||

ಇಂತುಗೈದಿಹ ಪುರದ ಜನರನು
ಸಂತಸದಿ ಹರಿಸುತ್ತ ಬೋಧಿಸ-
ಲಂತರಂಗದ ಸುಖದ ಮಾರ್ಗವ ಪೇಳ್ದ ವಚನಗಳ
ಅಂತು ಪುರಜನ ಸಡಗರವನತಿ
ಶಾಂತಮೂರುತಿ ಸತ್ಯಬೋಧರಿ-
ಗಿಂತು ಪೂಜಿಸಿ ನಿತ್ಯ ಪಡೆದುದು ಕೀರ್ತಿ
ಸವಣೂರು || ೪ ||

ನಿತ್ಯದಲಿ ಬೋಧಿಸುವ ವಚನದ
ಸತ್ಯವಾಣಿಗೆ ಮೆಚ್ಚಿ ಪುರಜನ
ಸತ್ಯಬೋಧರ ಮನೆಗೆ ಮೆರಿಸುತ ಮತ್ತೆ ಕರೆಯುವರು
ನಿತ್ಯವೀತೆರ ತಪದ ಮಹಿಮೆಗೆ
ಸುತ್ತ ನೆರೆಯುತಲಿತ್ತು ಜನರಿದ
ನೆತ್ತಿ ಹೇಳಲು ಗೂಢಚಾರರ ದೊರೆಯು-
ಕೇಳಿದನು || ೫ ||

ಒಂದು ದಿನ ಸವಣೂರದೊಡೆಯನು
ಬಂದಿರುವ ಗುರುಗಳನು ಕಾಣಲ-

ದೆಂದು ಬರಬೇಕೆಂದು ಕೇಳಿದ ಸಚಿವರನು ಕಳಿಸಿ
ಎಂದು ಬೇಕಾದಾಗ ಬರಲ್ಕವ-
ರೆಂದು ಪೇಳಲು ಮಂತ್ರಿವರ್ಯರು
ಬಂದು ತಿಳಿಸಲು ಭವ್ಯಮಂಟಪ ಕಟ್ಟಿಸಿರಿಯೆಂದ ॥ ೧ ॥

ಆಗ ರಾಜನ ಬರವ ನೆನೆವುತ
ಭೋಗವೆಮಗಿದ್ದಂತೆ ನಡೆವುದು
ಸಾಗಿ ಬರುವನುಭೂಪ ಮಂಟಪಗೃಹಕೆ ನಾಳಿನಲಿ
ಯೋಗಬಲದಲಿ ತಿಳಿದು ಗುರುಗಳು
ಲೋಗರಂತೆಯೆ ಇದ್ದುಬಿಟ್ಟರ
ದಾಗುಹೋಗುಗಳೇನದೆಂದಿತು ಸಕಲಪರಿವಾರ ॥ ೨ ॥

ಎಂಥ ಗುರುಗಳ ಕಾಣುತಿರುವೆನ
ದೆಂತು ಸಿದ್ಧತೆಯಾದುದೆನುತಲಿ
ದಂತಿವಾಹನರಾಜನಿದ್ದನು ಮನದಿ ಯೋಚಿಸುತ
ಇಂಥಗುರುಗಳ ಭೆಟ್ಟಿಯಾಗಲ
ದೆಂತು ಬರಿಗೈಯಿಂದ ಹೋಗುವ
ದೆಂತು ಹೆಚ್ಚಿನ ಭಕ್ಷ್ಯಮೊಯ್ಯಲೆಬೇಕುಬೇಕೆಂದ ॥ ೩ ॥

ಪರಿಪರಿಯ ಪಕ್ವಾನ್ನ ಮಾಡಿಸಿ
ಹರುಷದಿಂದಲಿ ಹೊನ್ನತಟ್ಟೆಯ
ಲಿರಿಸಿತರಿದ ತನ್ನ ಜಾತಿಯ ರೀತಿನಡತೆಯಲಿ
ಅರಮನೆಯ ಸೊಬಗನ್ನು ಮೀರಿಸಿ
ಮೆರೆಯುವಮರಾವತಿಯದೆನ್ನುವ
ತೆರದಿ ಸಿಂಗರಿಸಿತ್ತು ಮಂಟಪ ವಿವಿಧ ರೀತಿಯಲಿ ॥ ೪ ॥

ಅಂದಿನುದಯದಿ ಸತ್ಯಬೋಧರು
ಮಂದಹಾಸದೆ ಪೂಜೆ ಮಾಡುತ

ಸಿಂಧುಶಯನನೆಧೊರೆಯು ನಿನ್ನೊಂದಂಶವೆಂದಂದು
ಸುಂದರಾಂಗನೆ ಬಾದರಾಯಣ
ಇಂದುನೀನೇ ಕಾಯ್ವುದೆನ್ನುತ
ಹೊಂದಿ ನಡೆದರು ಶಿಷ್ಯವೃಂದದಿ ಮೆರೆವ
ಮಂಟಪಕೆ ॥ ೧೦ ॥

ಬರುವ ಮಾರ್ಗದೆ ಬೆರಗುಬಟ್ಟಿಹ
ಪುರಜನಕೆ ಹೇಳಿದರು ನಿಜಸಿರಿ
ನರಹರಿಯು ಯಾನಿರಲು ಹೃದಯದಿ ಬಾಧೆ ತಾ ಬರದು
ಗುರುವಚನವಿಂತಾಂಗೆ ಕೇಳುತ
ಪುರಜನರದಾರುತಿಯ ಗೈಯ್ಯುತ
ವರ ಕುಸುಮಮಾಲೆಗಳ ಹಾಕುತ
ಮುದದಿನಮಿಸಿದರು ॥ ೧೧ ॥

ಅಂದು ಚಿಂತೆಯಚಿತೆಯ ನಂದಿಸಿ
ನಂದದಿಂದಲೆ ಭರದಿ ಬರುತಿರ
ಲಂದ ಚೆಂದವು ತಳಿರು ತೋರಣ ಭವ್ಯಮಂಟಪದೆ
ನಂದನವೆ ತಾನಿಳಿದು ಬಂದುದೊ
ನಂದಗೋಪನಗೃಪವೆ ಬಂದುದೊ
ಚೆಂದ ನೋಡಲು ಸಾಲದಾಗಿಹವೆರಡು ಕಣ್ಣುಗಳು ॥ ೧೨ ॥

ಮುಂದಣದ ಬಾಗಿಲಿಗೆ ಬಂಧನ
ಚೆಂದಬಾಳೆಯು ತೆಂಗುಗರಿಗಳು
ಮಂದಹಾಸದೆ ಮನದಲಂದರಿದಾರ ಬಂಧನವು
ಸಂಧಿಸಿದ ಫಲ ಪುಷ್ಪ ಕೊಳ್ಳುತ
ಹೊಂದಿ ಪೀಠದೆ ಕುಳಿತು ಮಂಟಪ
ದಂದ ನೋಡುತ ಯುವನ ರಾಜನ ಮನಕೆ
ಮರುಗಿದರು ॥ ೧೩ ॥

ಬಂದು ರಾಜನು ದೂರದಿಂದಲೆ
ಗಂಧಪುಷ್ಪಗಳಿಂದಲರ್ಚಿಸಿ
ಮಂದಹಾಸದಲಿಂತು ಬೇಡಿದ ಕರ ಮುಗಿಮುಗಿದು
ಬಂದಪರಿಜನ ಶಿಷ್ಯರೆಲ್ಲರು
ಬಂಧುಬಾಂಧವ ಮಂತ್ರಿಬಳಗವು
ಚಂದದಲಿ ಸ್ವೀಕರಿಸುವುದು ಪ್ರಸಾದವ
ಶಾಂತಚಿತ್ತದಲಿ || ೧೪ ||

ಅಂದು ರಾಜನ ಮನವನಿರುಕಿಸಿ
ಬಂದು ಮಂಟಪ ಮಧ್ಯ ಕುಳಿತರ
ದಂದಗೆಟ್ಟಹ ಮುಖದಿಹಲಬರು ಬಲೆಗೆ ಬಿದ್ದಂತೆ
ಬಂದಿರುವರೇ ಮಂತ್ರಿ ನವವಿಧ
ಬಂದಿರುವರೇ ಪರಿಜನರದೇ
ನೆಂದು ಕೇಳುತ ಆಗ ಗುರುಗಳ ಹೋಗಿ ಕುಳಿತರು
ತಮ್ಮ ಆಸನದಿ || ೧೫ ||

ಪ್ರತಿ ದಿನದ ರೀತಿಯಲಿ ಗುರುಗಳು
ನುತಿಸಿ ಪರಮಾತ್ಮನಿಗೆಯಪ್ಪಿಸಿ
ಹಿತದಿತಂದಿಹ ತೀರ್ಥ ಶಂಖದಿ ಹಾಕಿಸಿ ಸಿಂಪಡಿಸೆ
ಪತಿತಮಾಂಸದ ಭಕ್ಷ್ಯವೆಲ್ಲವು
ಯತಿಯ ಮಹಿಮೆಯ ಹೇಳಲಸದಳ
ಹಿತದಿತತ್ ಕ್ಷಣಪುಷ್ಪವಾದವು
ಧೊರೆಯುಸ್ಸೈವರೆದ || ೧೬ ||

ಸತ್ಯ ಸತ್ವಪರೀಕ್ಷೆಯಾಯಿತು
ಮತ್ತೆ ಗುರುಗಳು ದಯದೆ ಕಾಣುತ
ಲಿತ್ತು ದಿವ್ಯದೃಷ್ಟಿ ಹರಿಸುತಲಿಹರು ರಾಜನಿಗೆ
ಸತ್ಯಬೋಧರದೇನದದ್ಭುತ
ಸತ್ಯ ಪೈಗಂಬರರ ರೂಪವೆ
ಮತ್ತೆ ಕಂಡಿತು ದೊರೆಗೆ ದಿಟವಾಗಿ || ೧೭ ||

ಗುರುವು ದೇವಾಂಶನಿರುವುದು ದೊರೆ
ಯರಿದು ಮಾಡಿದ ಕೃತ್ಯಕಾಗಿಯೆ
ಮರುಗಿ ಬಾಗಿದ ಪಾದಕಮಲವ ಕಂಡು ಭಕುತಿಯಲಿ
ಗುರುವೆ ನೀನೇ ಕ್ಷಮಿಸು ದಯದಲಿ
ನರಗುರಿಯು ನಾ ತಪ್ಪು ಮಾಡಿದೆ
ತರಳನೆನ್ನುತ ಬೇಡಿಕೊಂಡನು
ಕೈಯ ಮುಗಿಮುಗಿದು || ೧೮ ||

ಅಂದರೀಪರಿ ಸತ್ಯಬೋಧರು
ಬಂದ ಕೆಲಸವು ಚೆಂದವಾಯಿತು
ಹೊಂದಿತೆಲ್ಲವು ದೇವರಾಟವು ತಾನೆ ನಡೆದಿಹುದು
ಕಂದಗೈದಪರಾಧ ಸಹಿಸದ
ತಂದೆತಾಯಿಗಳುಂಟೆ ಜಗದಲಿ
ಬಂದ ಸಂಕಟ ದೂರವಾಯಿತು ಆರಿಗಾರುಂಟು || ೧೯ ||

ಗುರುವು ಗೈದೀಕ್ಷಮೆಯು ಸಾಕಿದು
ಪರಮವರವೇ ದೊರೆಕಿತೆನುತಲೆ
ಹರುಷದಿಂದಲಿ ರಾಜ ಬೇಡಿದ ಗುರುಗಳಂಘ್ರಿಯಲಿ
ಇರಲುಬೇಕಿನ್ನೆಮ್ಮ ಪುರದಲಿ
ನಿರುತ ಸವಣೂರಲ್ಲಿ ತಪ್ಪದೆ
ಪರಿಜನರನುದ್ಧರಿಸಿ ಪೊರೆಯಿರಿ ಅಂದನಾ ರಾಜಾ || ೨೦ ||

ನೀನೆ ತಂದೆಯು ಆಪ್ತ ಬಂಧವು
ನೀನೆ ತಾಯಿಯು ನೀನೆ ಸರ್ವವು
ನೀನೆನಗೆ ಗುರುದೇವ ದೇವರ ದೇವ ನಮಿಸುವೆನು
ಮಾನನಿಧಿ ನೀ ಕಾಯದಿರದಿರೆ ಈ
ದೀನ ನನ್ನನು ಕಾವರಾರ್ಯೆ
ಹೀನಕಾರ್ಯವ ಮಾಡಿ ಮರಗುವೆ ಕಾಯೊ
ಗುರುರಾಯ || ೨೧ ||

ನಿನ್ನ ಧರ್ಮದೆ ನಿಧನವಾದರು
ಚೆನ್ನವಪ್ಪುದು ಸತತ ಭಯವಿಹ
ದಮ್ಯಧರ್ಮದೊಳದಕೆ ನೀ ನಡೆ ನಿನ್ನ ಧರ್ಮದಲಿ
ಅನ್ಯರನುಜರೆಯದಲೆ ಯೋಗ್ಯರ
ಮನ್ನಣೆಯ ಮಾಡುತ್ತ ಸಲುಹೈ
ನನ್ನಿಯಲಿ ಈ ಪುಷ್ಪರಕ್ಷಿಸು ಅಂದು ಹರಿಸಿದರು || ೨೨ ||

ಭವವಕಳೆಯಿರಿ ಎನ್ನ ದೇವರೆ
ಭುವನ ವಂದಿತ ತಮಗೆ ಹಿತಕರ
ನವಭವನ ಕಟ್ಟಿಸಿ ಕೊಡುವೆನಿರಬೇಕು ಕೃಪೆಯಿಂದ
ಅವಗುಣ ಪರಿಹರಿಸು ದೇವರೆ
ಹವಣದಲಿ ನಾ ಸೇವೆ ಮಾಡುವ
ಸವಣಪುರದಲಿ ನಾನು ಕಿಂಕರನೆಂದನಾ ರಾಜಾ || ೨೩ ||

ಯಾವ ಮೂರ್ತಿಯ ತಪದ ಕೊನೆಯಲಿ
ಪಾವಕನು ತಲೆದೋರಿದನೊ ತತ್
ಪಾವನರಮಹಿಮೆಯನು ಪರುಕಿಸೆಮಾನವರಿಗೆಣೆಯೇ
ಕಾವಧಣಿತಾ ಬಾದರಾಯಣ
ನಾಮ ಪರಿಯಲಿ ಸಲಹಿದನೊ ಗುರು
ಭಾವನೆಯ ತಿಳಿತಿಳಿದು ನಡೆವುದು ಭಕ್ತಜನರೆಲ್ಲ || ೨೪ ||

ಪರಮ ಹರುಷದೆ ಪಾದಕೆರುಗುತ
ಗುರುಗಳಡಿಯಲಿ ಕುಳಿತು ಕೇಳುತ
ನಿರುತವುಪದೇಶಾಮೃತದಿಸುಖಿ ಯಿದ್ದನಾ ರಾಜಾ
ಗುರುಮಹಿಮೆ ಹಿರಿದಿಹುದು ಸಂತತ
ಪರಿಜನರು ಸೇವಿಪರು ತಪ್ಪದೆ
ಪರಮ ಧನ್ಯರು ಗುರುಗಳನ್ನು
ತದುರಿತವರಿಯದಲೆ || ೨೫ ||

ತ್ವರಿತದಲಿ ಕಾರ್ಮಿಕರ ಕರಯಿಸಿ
ಭರದಿ ಕಟ್ಟಿಸಿಕೊಟ್ಟ ಮಠವನು
ಇರುಳು ಹಗಲೆನ್ನದಲೆ ದುಡಿಯುತ ರಾಜ ಮುಂದಾಗಿ
ಕರೆದು ಕೊಟ್ಟನು ಹಿರಿಯ ಪೀಠವ
ಸರುವ ವಿಭವದಿ ಸೇವೆ ಮಾಡುತ
ಧರೆಯು ಪೊಗಳುವ ತೆರದಿ ಗುರುಗಳ ನಿತ್ಯ
ಭಜಿಸುತಲಿ ॥ ೨೭ ॥

ಇರಲಮಾಸಿಯ ರಾತ್ರಿ ಸೂರ್ಯನ
ಪರಮ ಭಕ್ತರಿಗೆಲ್ಲ ತೋರಿಸಿ
ಹರಿವ ಭಾಗೀರಥಿಯ ತರಿಸುತ ವಿಷ್ಣುತೀರ್ಥದಲಿ
ಬರಲು ಕಾಹಿಲೆ ದಂಡಕಾಷ್ಠವೆ
ಸರಿದು ನಡುಗಿತು ಗರಳ ಮರ್ದಿಸಿ
ಯಿರುತಲಿದ್ದರು ಸತ್ಯಬೋಧರು ಸವಣಪುರದೊಳಗೆ ॥ ೨೭ ॥

ಶ್ರದ್ಧೆಯೊಂದಿದೆ ಎನ್ನ ಮನದೊಳು-
ಬುದ್ಧಿಯೆಲ್ಲವು ವಿದ್ಯೆಯೆಲ್ಲವು
ಆದ್ಯ ಗುರುಗಳೆ ನೀವೆ ನುಡಿಸಿದಿರೆನ್ನ ಮುಖದಿಂದ
ಸದ್ಗುರುವು ನೀ ನಿನ್ನ ಮಹಿಮೆಯ
ಸಿದ್ಧಪಡೆಯದ ಜನರು ಬಲ್ಲರೆ
ಸದ್ಯ ಬೇಕ್ಕೆ ಬೋಧೆಗ್ಗೆಯಲು ನಿತ್ಯವೀ ಜಗಕೆ ॥ ೨೮ ॥

ಆರು ನಿತ್ಯದಿ ಪಠಿಸುವರೊ ಇದ-
ನಾರು ನಿತ್ಯದಿ ಕೇಳುವರೊ ಇದ-
ನಾರು ನಿಯಮದಿ ಭಕ್ತಿಭಾವಗಳಿಂದ ಪೂಜಿಪರೋ
ಪಾರುಗಾಣುವರವರು ಮಹಿಮನ
ಚಾರುಚರಣವ ಪೊಂದಿ ಬಂಧನ
ಭಾರ ಕಳೆವರು ರಾಮವಾಕ್ಯವಿದೆಂದು ನಂಬುವದು ॥ ೨೯ ॥

ಶರಣ ಗುರುವರ ಶಿಷ್ಯವೃಂದಕೆ
ಶರಣು ಸಜ್ಜನ ಭಕ್ತವೃಂದಕೆ
ಶರಣು ಸಿರಿಗುರು ಸತ್ಯಬೋಧರ ಪಾದಪಂಕಜಕೆ
ಕರುಣದಲಿ ಕಾಪಾಡು ಗುರುವರ
ಪರಮ ಹರುಷದಿ ಕವಿತೆ ರಚಿಸಿದೆ
ಹರಿಸುವುದು ಶಿವರಾಯನನು ತಮ್ಮಯ ಕರುಣ
ದೃಷ್ಟಿಯಲಿ ॥ ೩೦ ॥

ಮಂಗಲಂ ಗುರುರಾಜನಿಗೆ ನಿಜ
ಮಂಗಲಂ ಗುರುಸತ್ಯಬೋಧಗೆ
ಮಂಗಲಂ ಮತಿಯಿತ್ತು ರಕ್ಷಿಸುತಿರುವ ಗಣಪತಿಗೆ
ಮಂಗಲಂ ಸರಸತಿಗೆ ಸಂತತ
ಮಂಗಲಂ ಸಿರಿದೇವಿ ಲಕ್ಷ್ಮಿಗೆ
ಮಂಗಲಂ ಶ್ರೀರಾಮನೆನ್ನಯ ಭಕ್ತಿ ಭಾವನೆಗೆ ॥ ೩೧ ॥



## ಹಾಡುಗಳ ಅಕಾರಾದಿ

ಶೀರ್ಷಿಕೆ (ರಚಯಿತರು) ಕ್ರಮಸಂಖ್ಯೆ

ಈ ಸಂಕಲನದಲ್ಲಿ ...

- ಸವಣೂರಿನ ಯತಿವರ ಶ್ರೀ ಸತ್ಯಬೋಧರನ್ನು ಸ್ತುತಿಸಿದ ಹರಿದಾಸರ ೪೦ ಹಾಡುಗಳಿವೆ.

- ಶ್ರೀ ವಿಜಯದಾಸಾರ್ಯರಿಂದ ಆರಂಭವಾಗಿ, ಗೋಪಾಲದಾಸ, ಜಗನ್ನಾಥದಾಸ, ಕರ್ಜಗಿ ದಾಸಪ್ಪ, ವ್ಯಾಸವಿಠ್ಠಲ, ಮು.ರ ಭಾವಪೂರ್ಣ ಹಾಡುಗಳಿವೆ, ಅಲ್ಲದೆ ೧೯/೨೦ ಶತಮಾನದವರು ಶ್ರೀಗಳನ್ನು ಹೊಗಳಿ ಹಾಡಿದ್ದಾರೆ. ಅವರಲ್ಲಿ ಸು.ರಂ.ಎಕ್ಕುಂಡಿ, ಸುಶೀಲೇಂದ್ರ ಮುಂಡರಗಿ, ಮೊದಲಾದ ಲೌಕಿಕರೂ ಇದ್ದಾರೆ.

- ಶ್ರೀ ಸತ್ಯಬೋಧರ ಸಂಪೂರ್ಣ ಚರಿತ್ರೆಯುಳ್ಳ ಮೂರು ಸುದೀರ್ಘ ಕವನಗಳಿವೆ.

- ಶ್ರೀಗಳವರೇ ಪ್ರಸ್ಥಾಪಿಸಿದ ಮೂರ್ತಿಗಳ, ಮಠದ ಪರಿಸರದ ಸೊಗಸಾದ ಚಿತ್ರಗಳಿವೆ.